# ಚಂದಮಾಮ


ಸಂಸ್ಥಾಪಕರು: ನಾಗಿರೆಡ್ಡಿ

ಸಂಚಾಲಕರು: 'ಚಕ್ರಪಾಣಿ'


---

ಮಾನವನು ಅವಲಂಬಿಸಬೇಕಾದ ಧರ್ಮಗಳು ಆತನು ಸಮಾಜದಲ್ಲಿ ನಿರ್ವಹಿಸುವ ಪಾತ್ರಕ್ಕೆ ತಕ್ಕ ಹಾಗೆ ಬೇರೆ ಬೇರೆ ವಿಧವಾಗಿರುತ್ತವೆ. ಸಾಧಾರಣನಾದೊಬ್ಬ ಗೃಹಸ್ಥನ ಧರ್ಮ ಪರಿಮಿತಿ ಅವನ ಹೆಂಡತಿ ಮಕ್ಕಳು ಬಂಧು ಬಳಗದೊಳಗಷ್ಟೇ ಇದ್ದರೆ, ಸಮಾಜ ಸುಧಾರಕನದು ಊರುಗಳನ್ನು ಬಳಸುವಂತಹುದು. ದೊಡ್ಡ ಉದ್ಯೋಗದಲ್ಲಿರುವವನು ಅದಕ್ಕೆ ತಕ್ಕ ಧರ್ಮಗಳನ್ನೆಲ್ಲ ಪಾಲಿಸಬೇಕು. ರಾಜನ ಧರ್ಮ ದೇಶದ ಪ್ರಜೆಗಳಿಗೆ ಸಂಬಂಧಿಸಿರುತ್ತದೆ. ಇದು ಈ ಸಂಚಿಕೆಯ "ದುಷ್ಟದಮನ" ಎಂಬ ಬೇತಾಳ ಕಥೆಯಲ್ಲಿ ಪ್ರತಿಫಲಿಸುತ್ತದೆ.

---


ಸಂಪುಟ: ೫೫ ] ಏಪ್ರಿಲ್ '೭೫ [ ಸಂಚಿಕೆ: ೪






# ಮಿತ್ರಭೇದ

## ೨೧

ಪಕ್ಷಿಗಳೆಲ್ಲವೂ ತಮ್ಮ ರಾಜನಾದ ಗರುತ್ಮಂತ ಅಥವಾ ಗರುಡನ ಬಳಿಗೆ ಹೋದುವು. ಅವುಗಳೆಲ್ಲವೂ ವಿಧವಿಧವಾದ ಸ್ವರಗಳಿಂದ ಅಳುವುದನ್ನು ನೋಡಿ ಗರುಡನು ಏನಾಯಿತೆಂದು ಕೇಳಿದನು.

"ನಮ್ಮೊಳಗಿನ ಟಿಟ್ಟಿಭದ ಮೊಟ್ಟೆಗಳನ್ನೆಲ್ಲ ಪದೇ ಪದೇ ಸಮುದ್ರವು ನುಂಗಿಬಿಡುತ್ತದೆ. ಇದಕ್ಕೆ ತಕ್ಕ ನಿವೃತ್ತಿ ಮಾಡದಿದ್ದರೆ ಬಲವಿದ್ದವರು ಬಲವಿಲ್ಲದವರಿಗೆ ಹೀಗೆಯೇ ಮಾಡುತ್ತಾರಲ್ಲಾ ಅಂತ ನಮಗೆಲ್ಲಾ ಭಯವಾಗಿದೆ." ಎಂದುವು ಪಕ್ಷಿಗಳು.

"ಟಿಟ್ಟಿಭವು ಮೊಟ್ಟೆಗಳನ್ನು ಬಿಟ್ಟು ಎಲ್ಲಿಗೆ ಹೋಯಿತು?" ಎಂದು ಗರುಡನು ಪ್ರಶ್ನೆ ಮಾಡಿದ.

"ಮಹಾಪ್ರಭುವೇ, ನಾವು ನಮ್ಮ ಹೊಟ್ಟೆಯ ಪಾಡಿಗಾಗಿ ಎಲ್ಲೆಲ್ಲಿಗೋ ಹೋಗಬೇಕಾಗುತ್ತದೆ. ಟಿಟ್ಟಿಭವು ಆಹಾರ ಹುಡುಕಲು ಹೊರಟುಹೋದ ಸಮಯದಲ್ಲಿ ಸಮುದ್ರವು ಅನ್ಯಾಯವಾಗಿ ಮೊಟ್ಟೆಗಳನ್ನು ಅಪಹರಿಸುತ್ತದೆ. ಈ ಪ್ರಪಂಚದಲ್ಲಿ ಎಲ್ಲಾ ದೋಷಗಳಿಗೂ ಹೊಟ್ಟೆಯ ಪಾಡೇ ಕಾರಣವೆಂದು, ಸಿಂಹಕ್ಕೂ ಟಗರಿಗೂ ನಡೆದ ಕಥೆಯಿಂದ ಗೊತ್ತಾಗುವುದಷ್ಟೆ?" ಎಂದಿತು ಹೆಣ್ಣು ಬಾತುಕೋಳಿ. "ಅದೇನು ಕಥೆ?" ಎಂದು ಗರುತ್ಮಂತನು ಕೇಳಲು, ಆ ಮುದಿ ಹೆಣ್ಣು ಬಾತುಕೋಳಿ ಆ ಕಥೆಯನ್ನು ಹೀಗೆ ಹೇಳಿತು:

### ಸಿಂಹ ಟಗರುಗಳ ಕಥೆ

ಒಂದು ಕಾಡಿನ ಸಮೀಪದಲ್ಲಿ ಒಂದು ಟಗರು ತನ್ನ ಮಂದೆಯ ಮೇಲೆ ಏನೋ ಕೋಪವಿಟ್ಟುಕೊಂಡು ದೂರ ಹೋಗಿ ಒಂಟಿಯಾಗಿ ಬದುಕಿಕೊಂಡಿತ್ತು. ಸ್ವೇಚ್ಛೆಯಾಗಿ ಯಾವ ಹಂಗೂ ಇಲ್ಲದೆ ಆಹಾರ ತಿನ್ನುತ್ತ ಅದು ತುಂಬ ಧಷ್ಟಪುಷ್ಟವಾಯಿತು. ಮೈ ತುಂಬ ಬೆಳೆದ ರೋಮಗಳಿಂದ, ಭಯಂಕರವಾದ ಕೊಂಬುಗಳಿಂದ, ಕರ್ಕಶವಾದ ಕಂಠಧ್ವನಿಯಿಂದ ಅದು ತಿರುಗಾಡುವಾಗ, ಇತರ ಮೃಗಗಳು ತುಂಬ ಹೆದರಿ ಅಡಗಿಕೊಳ್ಳುತ್ತಿದ್ದುವು.

ಒಂದು ದಿನ ಒಂದು ಸಿಂಹವು ಆಕಸ್ಮಿಕವಾಗಿ ಆ ಟಗರನ್ನು ನೋಡಿಬಿಟ್ಟಿತು. ಅದರ ಉದ್ದುದ್ದವಾದ ರೋಮಗಳ ಗುಂಪನ್ನೂ, ತಿರುಗು ಕೊಂಬುಗಳನ್ನೂ ನೋಡಿ ಸಿಂಹವು ಹೆದರಿ, "ಅಬ್ಬಾ! ಇದು ನಿರ್ಭೀತಿ

ಯಿಂದ, ನಿಶ್ಚಿಂತೆಯಿಂದ ಈ ಅಡವಿಯಲ್ಲಿ ತಿರುಗಾಡುವುದೆಂದರೆ, ನನಗಿಂತ ಹೆಚ್ಚಿನ ಬಲಶಾಲಿಯಾಗಿದ್ದೀತು!" ಎಂದುಕೊಂಡಿತು.

ಆದರೆ ಒಂದು ದಿನ ಆ ಟಗರು ತನ್ನ ಹಸಿವೆಯನ್ನು ಶಮನ ಮಾಡಿಕೊಳ್ಳಲು ಹುಲ್ಲು ಮೇಯುತ್ತಿರುವಾಗ ಸಿಂಹವು ಅದನ್ನು ನೋಡಿ ತುಸು ಪರೀಕ್ಷೆ ಮಾಡಿತು.

"ಓಹೊ! ಇದು ಹುಲ್ಲು ಮೇಯುವ ಪ್ರಾಣಿ ತಾನಾ? ಹಾಗಿದ್ದರೆ ಇದು ನನಗೆ ಸಮನಾದ ಬಲಶಾಲಿಯಾಗದು. ಅಷ್ಟೇ ಅಲ್ಲ, ಇದು ನನ್ನ ಆಹಾರ ಪ್ರಾಣಿಯೇ ಸರಿ" ಎಂದುಕೊಂಡು ಸಿಂಹವು ಆ ಟಗರನ್ನು ಹಿಡಿದು ತಿಂದೂ ಬಿಟ್ಟಿತು.

ಬಾತುಕೋಳಿ ಈ ಕಥೆಯನ್ನು ಹೇಳಿ ಮುಗಿಸುವುದಕ್ಕೂ, ವಿಷ್ಣುಮೂರ್ತಿಯ ಕಡೆಯಿಂದ ಗರುತ್ಮಂತನಿಗೆ ಕರೆ ಬರುವುದಕ್ಕೂ ಸರಿಹೋಯಿತು. ವಿಷ್ಣುವಿಗೆ ಗರುಡನ ಮೇಲೇರಿ ಎಲ್ಲಿಗೋ ಹೋಗುವ ಅಗತ್ಯವಿದೆಯಂತೆ.

ಕೂಡಲೇ ಗರುಡನು, ಪಕ್ಷಿಗಳ ದುಃಖವನ್ನು ತನ್ನಲ್ಲಿ ತುಂಬಿಕೊಂಡು ವಿಷ್ಣುವಿನ ಬಳಿಗೆ ಹೋಗಿ, "ಸ್ವಾಮಿ, ಈಗ ನಾನು ಹೇಗೆತಾನೇ ಬರಲಿ? ನನ್ನ ಜಾತಿಗೆ ಸೇರಿದ ಟಿಟ್ಟಿಭದ ಮೊಟ್ಟೆಗಳನ್ನು ಯಾವ ಕಾರಣವೂ ಇಲ್ಲದೆ ಸಮುದ್ರವು ಅಪಹರಿಸಿಕೊಂಡಿದೆಯಂತೆ. ಅವುಗಳನ್ನು ಆ ಹಕ್ಕಿಗೆ ವಾಪಸು ಕೊಡಿಸಬೇಕಾದುದು ನನ್ನ ಮೊದಲನೇ ಧರ್ಮವಲ್ಲವೇ? ಸಮುದ್ರವು ಕೇಳುವವರಿಲ್ಲವೆಂದು, ಸಣ್ಣಪುಟ್ಟ ಪ್ರಾಣಿಗಳಿಗೆ ಅನ್ಯಾಯ ಮಾಡುತ್ತಿದ್ದರೆ, ಪಕ್ಷಿಗಳಿಗೆಲ್ಲ ದೊಡ್ಡವನೆನಿಸಿ, ನಿಮ್ಮ ವಾಹನನೆನಿಸಿ ನನಗೇನು ಘನತೆ ಬಂದಹಾಗಾಯಿತು?" ಎಂದು ಹೇಳಿದ.

"ಹಾಗೇನು?" ಎಂದು ವಿಷ್ಣು ತನ್ನ ಬಿಲ್ಲಿಗೆ ಬಾಣ ಹೂಡಿ, ಸಮುದ್ರಕ್ಕೆ ಗುರಿ ಹಿಡಿದು, "ಎಲೋ ಸಮುದ್ರನೇ, ದೊಡ್ಡವನಾದ ನೀನು ಸಣ್ಣ ಪುಟ್ಟ ಪಕ್ಷಿಗಳನ್ನು ಕಾಡಿ ಆಡುವೆಯಾ?



ನಾಚಿಕೆಯಿಲ್ಲವೆ? ಒಳ್ಳೆಯ ಮಾತಿನಲ್ಲಿ ಟಿಟ್ಟಿಭದ ಮೊಟ್ಟೆಗಳನ್ನೆಲ್ಲ ಕೂಡಲೇ ಅದಕ್ಕೆ ಕೊಟ್ಟುಬಿಡು. ಇಲ್ಲದಿದ್ದರೆ ಈ ಬಾಣದಿಂದ ನಿನ್ನನ್ನು ಒಣಗಿಸಿ ಮರಳು ರಾಶಿಯಾಗಿ ಮಾಡಿಬಿಡುತ್ತೇನೆ" ಎಂದನು.

ವಿಷ್ಣುಮೂರ್ತಿಯ ಕೋಪವನ್ನೂ ಬಾಣವನ್ನೂ ನೋಡಿ ಸಮುದ್ರವು ಹೆದರಿ ನಡುಗಿ ಕ್ಷಮೆ ಕೇಳುತ್ತ, ಟಿಟ್ಟಿಭದ ಎಲ್ಲಾ ಮೊಟ್ಟೆಗಳನ್ನೂ ತೀರಕ್ಕೆ ತಂದು ಆ ಹಕ್ಕಿಗೆ ಸಮರ್ಪಿಸಿಬಿಟ್ಟಿತು.

ಹೀಗೆ ದಮನಕ ನರಿ ಸಂಜೀವಕ ಎತ್ತಿಗೆ ಕಥೆಗಳನ್ನು ಹೇಳಿ, "ನಿನಗೆ ಅಂತಹ ಮಿತ್ರರು ಯಾರು ಹೇಳು? ಆದುದರಿಂದ ನೀನು ಸಿಂಹರಾಜನೊಂದಿಗೆ ಸೆಣಸುವ ಆಲೋಚನೆ ಬಿಟ್ಟುಬಿಡು" ಎಂದಿತು.

"ಮಿತ್ರನೇ, ಪಿಂಗಳಕನು ನನ್ನನ್ನು ಕೊಲ್ಲಲಿರುವನೆಂಬ ಸಮಾಚಾರ ನನಗೆ ಹೇಗೆ ಗೊತ್ತಾದೀತು? ಅವನು ಸುಮುಖನಾಗಿರುವನೋ ಕೊಲ್ಲಲು ಬರುವನೋ ಎಂಬುದನ್ನು ಹೇಗೆ ತಿಳಿಯಲಿ?"

ಎಂದು ಸಂಜೀವಕವು ದಮನಕವನ್ನು ಕೇಳಿತು. "ಅದನ್ನು ಬಹಳ ಸುಲಭವಾಗಿ ತಿಳಿದುಕೊಳ್ಳಬಹುದು. ಸಿಂಹವು ತನ್ನ ಸಿಂಹಾಸನವಾದ ಬಂಡೆಯ ಮೇಲೆ ಕುಳಿತುಕೊಂಡು, ನೀನು ಸಮೀಪಿಸುವಾಗ ನಗುತ್ತ, ಪ್ರಶಾಂತವಾಗಿದ್ದರೆ ನಿನಗೆ ಯಾವ ಅಪಾಯವೂ ಇಲ್ಲ. ಆದರೆ ಬಾಲವನ್ನು ತಿರುಗಿಸುತ್ತ, ಪಂಜಾಗಳನ್ನು ಬಿಗಿದುಕೊಂಡು, ನಿನ್ನನ್ನು ದೂರದಿಂದಲೇ, ತೀಕ್ಷ್ಣ ದೃಷ್ಟಿಯಿಂದ ನೋಡುತ್ತಿದ್ದಾನೆಂದರೆ ನಿನ್ನನ್ನು ಕೊಲ್ಲುವುದಕ್ಕೆ ತಯಾರಾಗಿದ್ದಾನೆಂದು ತಿಳಿಯಬಹುದು" ಎಂದಿತು ದಮನಕ ನರಿ.

ಇಷ್ಟು ಹೇಳಿ ದಮನಕವು ಅಲ್ಲಿಂದ ಹೊರಟು ಕರಟಕ ನರಿಯನ್ನು ಕೂಡಿಕೊಂಡಿತು. "ಏನು ಮಾಡಿ ಬಂದೆಯಪ್ಪಾ?" ಎಂದು ಕರಟಕವು ಪ್ರಶ್ನೆ ಮಾಡಿತು. "ಇಬ್ಬರ ನಡುವೆ ಬೆಂಕಿ ಹಚ್ಚಿ ಬಂದಿದ್ದೇನೆ." ಎಂದು ದಮನಕವು ಹೇಳಲು, "ನಿಜಕ್ಕೂ ಹಾಗೆ ಮಾಡಿದಿಯಾ?" ಎಂದು ಸಂದೇಹದಿಂದ ಕೇಳಿತು ಕರಟಕ ನರಿ.

"ನಾನು ಮಾಡಿದ ಕೆಲಸ ಹೇಗೆ ಫಲಿಸುವುದೆಂಬುದನ್ನು ನೀನು ಬೇಗದಲ್ಲೇ ನೋಡುವೆ. ಎತ್ತಿಗೂ ಸಿಂಹಕ್ಕೂ ಇದ್ದ ಸ್ನೇಹಬಂಧವನ್ನು ಇನ್ನೆಂದೂ ಕೂಡದ ಹಾಗೆ ಕತ್ತರಿಸಿ ಹಾಕಿಬಿಟ್ಟೆ." ಎಂದಿತು ದಮನಕ.

"ಅದರಲ್ಲಿ ಏನೂ ಆಶ್ಚರ್ಯವಿಲ್ಲ ಬಿಡು. ಒಂದೇ ಸಮನೆ ನೀರು ಹರಿಯುತ್ತಾ ಇದ್ದರೆ ಕಲ್ಲು ಕೂಡಾ ಸವೆದು ಹೋಗುತ್ತದೆ. ನೀನು ಒಂದೇ ಸಮನೆ ತಂತ್ರದ ಮೇಲೆ ತಂತ್ರ ಮಾಡುತ್ತಾ ಇದ್ದರೆ ಅವರ ಸ್ನೇಹ ಕೆಡದೆ ಮತ್ತೇನಾದೀತು? ಪಾಪ ಸಂಜೀವಕ! ಇದರಿಂದ ನಿನಗೆ ಏನು ಪ್ರಯೋಜನವೋ ನಾ ಕಾಣೆ!" ಎಂದಿತು ಕರಟಕ.

"ಇದೆಂತಹ ಮಾತು? ಆ ಮೇಲೆ ನಾನು ಪ್ರಧಾನ ಮಂತ್ರಿಯಾಗಿ ಒಳ್ಳೆಯ ಲಾಭ ಗಳಿಸುತ್ತೇನೆ. ಗ್ರಂಥಗಳ ಮೇಲೆ ಗ್ರಂಥಗಳನ್ನು ಓದಿಯೋದಿ, ಆ ಓದುಗಳಿಂದ ಧನವನ್ನೂ ಅಧಿಕಾರವನ್ನೂ ಸಂಪಾದಿಸಲಾಗದವನು ಯಾವುದಕ್ಕೂ ಆಗದವನೆಂದು ಹೇಳುತ್ತಾರಷ್ಟೆ?" ಎಂದಿತು ದಮನಕ.

"ಆದರೆ, ದಮನಕಾ, ಸ್ವಾರ್ಥವೂ ಹೀನವಾದುದೆಂದು ಹೇಳುತ್ತಾರಷ್ಟೆ? ತುಚ್ಛವಾದ ಈ ಶರೀರದ ರಕ್ಷಣೆಗಾಗಿ ಏನು ತೋರಿದರೂ ಮಾಡಿಬಿಡಬಾರದಪ್ಪ. ಅದಲ್ಲದೆ ಒಂದು ದಿನ ನಿನ್ನ ಮೋಸವು ಹೊರಗಾಗಿ ವಂಚಕನ ಕಥೆಯಲ್ಲಿ ಆದಹಾಗೆ ಕಡೆಗೆ ನಿನ್ನ ಪ್ರಾಣಕ್ಕೇ ಅಪಾಯ ಬರಬಹುದು. ಜಾಗ್ರತೆಯಪ್ಪಾ!" ಎಂದಿತು ಕರಟಕ.

"ಅದೆಂತಹ ಕಥೆ? ಎಂತಹ ವಂಚಕ?" ಎಂದು ದಮನಕವು ಪ್ರಶ್ನೆ ಮಾಡಲು, ಕರಟಕವು ವಂಚಕನ ಕಥೆಯನ್ನು ಹೀಗೆ ಪ್ರಾರಂಭಿಸಿತು:





# ದುಷ್ಟದಮನ

ರಾಜಾ ತ್ರಿವಿಕ್ರಮನು ತನ್ನ ಹಟದಂತೆ ಮತ್ತೆ ಮರದ ಬಳಿಗೆ ಹೋಗಿ, ಕೊಂಬೆಯನ್ನು ಹಿಡಿದು ನೇತಾಡುತ್ತಿದ್ದ ಮಾನವ ಶವವನ್ನು ಕೆಳಗಿಳಿಸಿ ತನ್ನ ಭುಜದ ಮೇಲೆ ಹೊತ್ತುಕೊಂಡು, ಎಂದಿನಂತೆ ಮೌನವಾಗಿ ಸ್ಮಶಾನದ ದಾರಿ ಹಿಡಿದು ನಡೆಯ ತೊಡಗಿದನು. ಆಗ ಶವದೊಳಗೆ ಹುದುಗಿಕೊಂಡಿದ್ದ ಬೇತಾಳವು ಮಾತಾಡಲು ತೊಡಗಿ, "ಮಹಾ ರಾಜನೇ, ನೀನು ಮಾಡುವ ಕೆಲಸವು ಎಷ್ಟೊಂದು ಹೀನವಾಗಿದ್ದರೂ, ಲೋಕ ಕಲ್ಯಾಣಕ್ಕಾಗಿ ಹೀನ ಕೆಲಸ ಮಾಡಿದ ವಿಜಯನಂತೆ ನೀನು ಕೂಡಾ ಲೋಕ ಕಲ್ಯಾಣವನ್ನು ಕೋರುವವನೋ ಏನೋ? ನಿನಗೆ ದಾರಿಯ ಕಷ್ಟ ತಿಳಿಯದಂತಿರಲು ಆ ವಿಜಯನ ಕಥೆಯನ್ನು ಹೇಳುತ್ತೇನೆ, ಕೇಳುತ್ತಾ ನಡೆ" ಎಂದು ಈ ರೀತಿಯಾಗಿ ಕಥೆಯನ್ನು ಪ್ರಾರಂಭಿಸಿತು:

ಹಿಂದೆ ಮಾಳವದೇಶದ ರಾಜನಾಗಿದ್ದ ಮಾರ್ತಾಂಡ ವರ್ಮನೆಂಬ ರಾಜನಿಗೆ ಒಬ್ಬನೇ ಮಗನಾಗಿ ಹುಟ್ಟಿದ ವನು ವಿಜಯ. ಅವನು ಉಪನಯನವಾದ ಕೂಡಲೇ ವಿದ್ಯಾಭ್ಯಾಸ ಮಾಡಲು ತನ್ನ ದೇಶವನ್ನು ಬಿಟ್ಟು ನೆರೆಯ ದೇಶಕ್ಕೆ ಹೋಗಿ, ದೂರದಲ್ಲಿದ್ದ ಒಂದು

ಬೇತಾಳಕಥೆಗಳು?...



ಖ್ಯಾತಿವೆತ್ತ ಗುರುಕುಲದಲ್ಲಿ ಸೇರಿದನು. ಅಲ್ಲಿ ಅವನು ರಾಜನೀತಿಗಳನ್ನೂ, ಯುದ್ಧ ವಿದ್ಯೆಗಳನ್ನೂ, ಧರ್ಮ ಶಾಸ್ತ್ರಗಳನ್ನೂ ಅಭ್ಯಾಸ ಮಾಡುತ್ತ ಯುಕ್ತ ವಯಸಿಗೆ ಬಂದನು. ಅಲ್ಲಿ ಕಲಿತ ವಿದ್ಯೆಗಳಲ್ಲೆಲ್ಲ ಅವನೇ ಮೊದಲಿಗನಾದನು.

ಒಂದುದಿನ ಆ ಗುರುಕುಲದ ಅಧಿಪತಿಯಾದ ಮಹರ್ಷಿ ವಿಜಯನನ್ನು ಕರೆದು, "ಅಪ್ಪಾ, ಇಲ್ಲಿ ಕಲಿಯುವ ನಿನ್ನ ವಿದ್ಯಾಭ್ಯಾಸವು ಪೂರ್ತಿಯಾಯಿತು. ನೀನು ಯುವರಾಜನಾಗಿ ಅಭಿಷೇಕ ಮಾಡಿಸಿಕೊಳ್ಳುವ ವಯಸ್ಸೂ ಬಂದಿದೆ. ಇನ್ನು ನೀನು ನಿನ್ನ ದೇಶಕ್ಕೆ ಹೊರಟುಹೋಗಿ ರಾಜ್ಯಪಾಲನೆಯನ್ನು ಕೈಕೊಂಡು ಮುಂದೆ ಪ್ರಜಾರಂಜಕನೂ, ಆರೋಗ್ಯದಿಂದ ಬಲವಂತನೂ ಆಗಿ ಬಾಳಬೇಕೆಂದು ಹಾರೈಸಿ ನಿನ್ನನ್ನು ಹರಸುತ್ತೇನೆ. ಹೋಗಿಬಾರಪ್ಪ. ದೀರ್ಘಾಯುಷ್ಮಂತನಾಗಿ ವಿಜಯೀಯಾಗಿರು" ಎಂದು ಹರಸಿದನು. ಹೀಗೆ ವಿಜಯನು ಗುರುಗಳಿಂದ ಅಪ್ಪಣೆ ಪಡೆದುಕೊಂಡು, ತನ್ನ ಕುದುರೆಯ ಮೇಲೆ ಒಬ್ಬಂಟಿಗನಾಗಿ ತನ್ನ ದೇಶಕ್ಕೆ ಪ್ರಯಾಣ ಹೊರಟನು. ಅವನು ತನ್ನ ದೇಶದ ಸರಿಹದ್ದಿನೊಳಗೆ ಪ್ರವೇಶಿಸಿ, ಮುಂದೆ ಮುಂದೆ ಸಾಗುತ್ತಿದ್ದಂತೆ, ಆ ರಾಜ್ಯದ ಪರಿಸ್ಥಿತಿ ಅವನ ಕಣ್ಣಿಗೆ ಕಟ್ಟಿದಂತಾಯಿತು. ತನ್ನ ತಂದೆಯ ಪರಿಪಾಲನೆ ಏನೂ ಚೆನ್ನಾಗಿಲ್ಲವೆಂಬುದು ಅಡಗಡಿಗೂ ಪ್ರತ್ಯಕ್ಷವಾಗ ಹತ್ತಿತು. ಪ್ರಜೆಗಳು ಆ ಪರಿಪಾಲನೆಯಲ್ಲಿ ಕಷ್ಟನಷ್ಟಗಳಿಂದ ಒದರಾಡುತ್ತ, ರಾಜನನ್ನು ವಿಧವಿಧವಾಗಿ ದೂಷಿಸುತ್ತ, ಬಂಡಾಯವೇಳುವ ತವಕದಲ್ಲಿದ್ದರು. ಸಣ್ಣಸಣ್ಣ ಗ್ರಾಮಗಳಲ್ಲಿ ಕೂಡ ಗ್ರಾಮಾಧಿಕಾರಿಗಳು ಪ್ರಜೆಗಳ ಕೋಪಕ್ಕೆ ಹೆದರುತ್ತ, ಬಂಡೇಳುವವರನ್ನು ಅಂಕೆಯಲ್ಲಿಟ್ಟುಕೊಳ್ಳಲು ಅಸಮರ್ಥರಾಗಿದ್ದರು. ವಿಜಯನು ನೋಡಿದ ಪ್ರತಿ ಚಿಕ್ಕ ಗ್ರಾಮಗಳಲ್ಲಿಯೂ, ದೊಡ್ಡ ಗ್ರಾಮಗಳಲ್ಲಿಯೂ ಪ್ರಜೆಗಳ ಅತೃಪ್ತಿಯೇ ಕಾಣಿಸತೊಡಗಿತು. ಎಲ್ಲಿ ನೋಡಿದರೂ ಕೊಲೆ, ಕೊಳ್ಳೆ, ಕಳ್ಳತನ, ದಾರಿದ್ರ್ಯ, ತೆರಿಗೆಗಳ ಭಾರ, ಅಧಿಕಾರಿಗಳ ಭಯ, ಬಲಿಷ್ಠರ ಬಲಾತ್ಕಾರ ಚರ್ಯೆಗಳೇ ಕಂಡುಬಂದುವಲ್ಲದೆ ಶಾಂತಿ ಸಮಾಧಾನಗಳಿರಲಿಲ್ಲ.

ಆದುದರಿಂದ ವಿಜಯನು ತನ್ನನ್ನು ಮಾತಾಡಿಸಿದವರ ಹತ್ತಿರ ತನ್ನ ಹೆಸರನ್ನು ಹೇಳಲು ನಾಚಿಕೆಯಾಗಿ, ತನ್ನ ಹೆಸರು ವಿನಯನೆಂದೂ, ಮಾಳವದ ರಾಜಾಸ್ಥಾನದಲ್ಲಿ ಉದ್ಯೋಗವೇನಾದರೂ ಕೇಳಲು ಹೋಗುತ್ತಿರುವೆನೆಂದೂ ಹೇಳತೊಡಗಿದನು.

ಅವನ ಸಂಗತಿ ಕೇಳಿ ತಿಳಿದ ವೃದ್ಧನೊಬ್ಬನು, "ಅಪ್ಪಾ, ಈಗ ಇರುವ ಮಾಳವದ ರಾಜಾಸ್ಥಾನದ ಕತೆ ಮುಗಿಯುವ ಕಾಲ ಬಂತು. ನಿನ್ನಂತಹ ಯುವಕರೆಲ್ಲರೂ ಚಂಪಾರಣ್ಯದಲ್ಲಿ ಸುಧೀರ ಕುಮಾರನ ನೇತೃತ್ವದಲ್ಲಿ ಸೈನಿಕರಾಗಿ ಸೇರಿ ಶಿಕ್ಷಣ ಪಡೆಯುತ್ತಿದ್ದಾರೆ. ಇವತ್ತಿಲ್ಲದಿದ್ದರೆ ನಾಳೆ ಸುಧೀರನೇ ಮಾಳವ ದೇಶದ ರಾಜನಾಗುವುದು ನಿಜ. ಅವನು ಮಾರ್ತಾಂಡ

ವರ್ಮನ ಮೇಲೆ ಧಾಳಿ ಮಾಡಲು ತಕ್ಕ ಸಮಯವನ್ನು ಎದುರು ನೋಡುತ್ತಿದ್ದಾನೆ. ಅವನ ಕಡೆಯವರು ರಾಜಧಾನಿಯ ಕೋಟೆಯೊಳಗೆ ಕೂಡಾ ಇದ್ದಾರೆ. ಅವರು ಕರೆಗೊಟ್ಟ ಮರುಕ್ಷಣದಲ್ಲಿ ಕೋಟೆ ಮಾರ್ತಾಂಡವರ್ಮನನ್ನು ಕಳೆದುಕೊಳ್ಳುತ್ತದೆ. ಅದೇ ಹೊತ್ತಿಗೆ ಪ್ರಜೆಗಳ ಕಷ್ಟಗಳೂ ತೀರಿಹೋಗುತ್ತವೆ. ಆದುದರಿಂದ ಶುದ್ಧವೀರನಾದ ನೀನು ಮಾಳವ ರಾಜನ ಬಳಿ ಹೋಗುವುದನ್ನು ಕುರಿತು ಸ್ವಲ್ಪ ಯೋಚಿಸುವುದು ಒಳಿತು." ಎಂದನು.

ಪರಿಸ್ಥಿತಿ ಅಷ್ಟರಮಟ್ಟಿಗೆ ತುಂಬಿ ಬಂದಿರುವುದನ್ನು ತಿಳಿದು ವಿಜಯನು ಬೆರಗಾದನು. ಆಮೇಲೆ ಅವನು ರಾಜಧಾನಿಗೆ ಹೋಗುವ ಆಲೋಚನೆಯನ್ನು ಬಿಟ್ಟು, ಚಂಪಾರಣ್ಯಕ್ಕೆ ಹೋಗುವ ದಾರಿ ತಿಳಿದುಕೊಂಡು ಅಲ್ಲಿಗೆ ಹೋದನು. ಚಂಪಾರಣ್ಯದ ಗುಡ್ಡ ಬೆಟ್ಟಗಳ ನಡುವೆ ದೊಡ್ಡದೊಂದು ನಗರವೇ ಇದ್ದಿತು. ಅಲ್ಲಿ ಸುಮಾರು ಲಕ್ಷ ಮಂದಿ ಯುವಕರಿದ್ದರು. ಅವರು ಅರಣ್ಯ ಜಾತಿಯವರ ಜತೆಯಲ್ಲಿ ಸ್ನೇಹದೊಂದಿಗೆ ತಿರುಗಾಡುತ್ತಾ, ರಾಜದ್ರೋಹವನ್ನು ಅವರಿಗೆ ಉಪದೇಶ ಮಾಡಿಕೊಂಡೇ ಇದ್ದರು. ಸುಧೀರನೆಂಬವನನ್ನು ಎಲ್ಲರೂ ತಮ್ಮ ರಾಜನೆಂದು ಮಾತ್ರವಲ್ಲ, ದೇವರೆಂದೇ ಭಾವಿಸುತ್ತಿದ್ದರು. ಚಂಪಾರಣ್ಯ ಪ್ರಾಂತವನ್ನು ಅಲ್ಲಿಯ ಅರಣ್ಯಜಾತಿಯವರು ಬಹಳ ಸಮರ್ಥತೆಯಿಂದ ರಕ್ಷಿಸುತ್ತಿರುವುದನ್ನು ವಿಜಯನು ನೋಡಿದನು. ಅವರನ್ನು ಹಿಡಿಯಲು ರಾಜನು ಕಳುಹಿಸಿದ ಗೂಢಚಾರರು ಒಬ್ಬರು ಕೂಡಾ ಹಿಂದಿರುಗಿ ಹೋಗಲಿಲ್ಲ. ಕೆಲವರು ಸತ್ತರು, ಮತ್ತೆ ಕೆಲವರು ಸುಧೀರನ ಕಡೆಗೆ ಒಡೆದುಕೊಂಡರು. ಅಂತೂ ಸುಧೀರನ ಬಲವು ಅಡಿಗಡಿಗೂ ಏರುತ್ತಿತ್ತು.

ಮಾರ್ತಾಂಡವರ್ಮ ರಾಜನು ಒಂದು ಸೈನಿಕ ದಳವನ್ನೇ ಆ ಪ್ರಾಂತಕ್ಕೆ ಕಳುಹಿಸಿದ್ದ. ಆ ಸೈನಿಕರು ಒಂದು ಕಣಿವೆಯನ್ನು ದಾಟುತ್ತಿರುವಾಗ



ಅಕಸ್ಮಾತ್ತಾಗಿ ಮೇಲಿನಿಂದ ಬಂಡೆಗಳು ಉರುಳುರುಳಿ ಬಿದ್ದು ಅವರೆಲ್ಲ ಹತರಾಗಿ ಹೋದರು.

ಅಂತಿರುವ ಚಂಪಾರಣ್ಯಕ್ಕೆ ವಿಜಯನು ಪ್ರವೇಶಿಸಿದ ಕೂಡಲೇ ನಾಲ್ವರು ಅರಣ್ಯವಾಸಿಗಳು ಅವನನ್ನು ಸುತ್ತಿಕೊಂಡು, ಅವನ ಹೆಸರು, ಊರು, ಕೆಲಸಗಳನ್ನು ಕೇಳಿದರು.

"ನನ್ನ ಹೆಸರು ವಿಜಯ. ನಾನು ಯುದ್ಧ ವಿದ್ಯೆಗಳಲ್ಲಿ ಉತ್ತೀರ್ಣನಾದ ಯೋಧ. ನಾನು ಸುಧೀರನ ಸೈನ್ಯದಲ್ಲಿ ಸೇರಲಿಕ್ಕಾಗಿ ಬಂದಿದ್ದೇನೆ. ಆತನೆಲ್ಲಿದ್ದಾನೆ?" ಎಂದು ಕೇಳಿದ ವಿಜಯ.

ಅರಣ್ಯಭಟರು ಅವನನ್ನು ಒಂದು ದೊಡ್ಡ ಗುಹೆಯೊಳಗೆ ಕರೆದುಕೊಂಡು ಹೋದರು. ಅಲ್ಲಿ ಸುಧೀರನು ಎತ್ತರವಾದ ಸ್ಥಳದಲ್ಲಿ ನಿಂತು, ಸುತ್ತಲೂ ಕೂಡಿದ ದೊಡ್ಡ ಗುಂಪನ್ನು ನೋಡಿ ಅಸ್ಖಲಿತ ವಾಣಿಯಿಂದ ಎಲ್ಲರಿಗೂ ತಿಳಿಯುವಂತೆ ಮಾತಾಡುತ್ತಿದ್ದ. ಯಾರೂ ವಿಜಯನನ್ನು ಮಾತಾಡಿಸಲಿಲ್ಲ.



ಯುವಕರ ಸಮೂಹವು ಬಹು ಶ್ರದ್ಧೆಯಿಂದ ಸುಧೀರನ ಮಾತನ್ನು ಕೇಳುತ್ತಿದ್ದಿತು. ವಿಜಯನು ಕೂಡಾ ಅವರ ನಡುವೆ ಸೇರಿಕೊಂಡು ಸುಧೀರನು ಹೇಳುವುದನ್ನು ಕುತೂಹಲದಿಂದ ಕೇಳತೊಡಗಿದನು.

"ರಾಜನೆಂದರೆ ಯಾರು? ಬಲವಿರುವವನೇ ರಾಜನೆಂಬುದು ಪ್ರಸಿದ್ಧ. ಅಂತಹ ರಾಜನು ತನ್ನ ಪರಿಪಾಲನೆಯಲ್ಲಿ ಪ್ರಜೆಗಳ ಕ್ಷೇಮವನ್ನು ದೃಷ್ಟಿಯಲ್ಲಿಟ್ಟು ನಡೆದುಕೊಂಡರೇನೇ ರಾಜ್ಯವು ಅವನ ವಶದಲ್ಲಿರುತ್ತದೆ. ಈಗಿನ ರಾಜ ಮಾರ್ತಾಂಡವರ್ಮನಿಗೆ ಬಲವೂ ಇಲ್ಲ, ಪ್ರಜೆಗಳ ಕ್ಷೇಮಾಕಾಂಕ್ಷೆಯೂ ಇಲ್ಲ, ವಿವೇಕವೂ ಇಲ್ಲ. ಅವನ ತಂದೆ ತಾತಂದಿರು ರಾಜರಾದುದರಿಂದ ಅವನೂ ತಾನು ರಾಜನೆಂದುಕೊಂಡಿದ್ದಾನೆ. ಹಾಗೆ ನೋಡಿದರೆ ಅವನ ತಾತ ರಾಜನಾಗಿ ಹುಟ್ಟಿದವನಲ್ಲ. ಅವರು ಸಾಧಾರಣ ದಳಪತಿಯಾಗಿದ್ದು, ಅಸಮರ್ಥನಾದ ರಾಜನನ್ನು ಕೊಂದು ತಾನೇ ರಾಜನಾದವರು. ಮಾರ್ತಾಂಡವರ್ಮನ ತಂದೆ ವಿವೇಕದಿಂದ ಪ್ರಜೆಗಳನ್ನು ಪಾಲಿಸಿ ತನ್ನ ರಾಜತ್ವವನ್ನು ನಿಲ್ಲಿಸಿಕೊಂಡರು. ರಾಜನಾಗಿರಲು ಯಾವ ವಿಧದಲ್ಲಿಯೂ ಅರ್ಹನಲ್ಲದ ಈಗಿನ ರಾಜ ಮಾರ್ತಾಂಡವರ್ಮನನ್ನು ನಾವು ಕೊಲ್ಲಲೇ ಬೇಕು, ಕೊಲ್ಲುತ್ತೇವೆ, ಕೊಲ್ಲದೇ ಬಿಡಲಾರೆವು. ಅವನ ಮರಣವನ್ನು ಹಬ್ಬದಂತೆ ಆಚರಿಸಿ ಪ್ರಜೆಗಳು ತಮಗೆ ಬೇಕಾದ ರಾಜನನ್ನು ತಾವೇ ನಿರ್ಣಯಿಸಿಕೊಳ್ಳುವರು. ಆಗತಾನೇ ಪ್ರಜೆಗಳಿಗೆ ಕ್ಷೇಮವೂ ಶಾಂತಿಯೂ ಉಂಟಾಗುವುದು."

ಹೀಗೆ ಸುಧೀರನು ಬಹಳ ಹೊತ್ತು ಹೇಳುತ್ತಾ ಹೋದನು. ಅವನ ಬಾಯಿಯಿಂದ ಬರುವ ಪ್ರತಿ ಮಾತೂ ವಿಜಯನ ಮನದಲ್ಲಿ ಚೆನ್ನಾಗಿ ನಾಟಿದುವು. ಅವನ ಭಾಷಣವು ಮುಗಿದ ಮೇಲೆ, ಅರಣ್ಯಭಟರು ವಿಜಯನನ್ನು ಅವನ ಬಳಿಗೆ ಕರೆದುಕೊಂಡು ಹೋದರು. ವಿಜಯನು ಅವನೊಂದಿಗೆ ತನ್ನ ಹೆಸರು ವಿನಯನೆಂದೂ, ಯುದ್ಧ ವಿದ್ಯೆ ಮೊದಲಾದ ಆಗತ್ಯವಿರುವ ವಿದ್ಯಾಭ್ಯಾಸಗಳನ್ನು ಮುಗಿಸಿ, ಉದ್ಯೋಗವನ್ನು ಹುಡುಕುತ್ತ ಬರುವಾಗ ಸುಧೀರನನ್ನು ಕುರಿತು ಕೇಳಿ, ಅವನ ಕೈಕೆಳಗೆ ಸೈನಿಕನಾಗಿರಲು ಬಂದಿದ್ದೇನೆಂದೂ ಹೇಳಿದನು.

ಸುಧೀರನು ವಿಜಯನ ಯುದ್ಧ ನೈಪುಣ್ಯತೆಗಳನ್ನು ಪರೀಕ್ಷಿಸಿ ಆಶ್ಚರ್ಯಪಡುತ್ತ "ನಮ್ಮ ಸೈನಿಕರಲ್ಲಿ ಶತ್ರುಗಳಿಗೆ ಬೆನ್ನು ತೋರಿಸದೆ ಪ್ರಾಣವನ್ನು ಪಣವಿಟ್ಟು ಹೋರಾಡುವವರು ಸಾವಿರಾರು ಮಂದಿ ಇರುವರಾದರೂ, ನಿನ್ನಂತಹ ನಿಪುಣರು ಬಹಳ ಕಮ್ಮಿ. ಯುದ್ಧ ನಡೆದಾಗ ನಿನಗೆ ಬಹುಮುಖ್ಯ ಹೊಣೆಗಾರಿಕೆ ಬರುತ್ತದೆ. ಉಜ್ವಲ ಭವಿಷ್ಯ ನಿನಗಾಗಿ ಕಾದಿದೆ." ಎಂದನು.

ವಿಜಯನು ತುಂಬ ಸಂತೋಷವನ್ನು ವ್ಯಕ್ತಪಡಿಸಿದನು. ಅವನ ಜತೆಯಿಂದ ಸುಧೀರನಿಗೆ ಬಹುದೊಡ್ಡ ಬಲ ಸಿಕ್ಕಿದ ಹಾಗಾಯಿತು.

ಮುಂದೆ ಬೇಗದಲ್ಲಿಯೇ ರಾಜನ ಕೋಟೆಯೊಳಗಿನಿಂದ ಸಂಕೇತದ ಸೂಚನೆಯೂ ಬಂದಿತು. ಸುಧೀರನು ತನ್ನ ಸೈನಿಕರನ್ನು ಬೇರೆ ಬೇರೆ ದಳಗಳಾಗಿ ವಿಭಜನೆ ಮಾಡಿ, ಒಂದೊಂದು ದಳಕ್ಕೂ ತಕ್ಕ ನಾಯಕರನ್ನು ಗೊತ್ತುಪಡಿಸಿ, ಮಾಳವದ ಕೋಟೆಯ ಮೇಲೆ ದಂಡೆತ್ತಿ ಹೊರಟನು. ವಿಜಯನು ಒಂದು ದೊಡ್ಡ ಸೇನೆಯ ದಳಕ್ಕೆ ನಾಯಕನಾಗಿದ್ದನು. ಈ ಬಂಡಾಯದ ದಳಕ್ಕೆ ಪ್ರಜೆಗಳ ಒತ್ತಾಸೆಯಿದ್ದುದರಿಂದ ರಹಸ್ಯವು ಬಯಲಾಗಲಿಲ್ಲ.

ಒಮ್ಮಿಂದೊಮ್ಮೆಗೇ ಎದ್ದು ಬಂದ ಈ ಬಂಡಾಯದ ಸೇನೆ ಕೋಟೆಯ ಮುಂದೆ ತಳವೂರಿದುವು. ಮತ್ತೆ ಸ್ವಲ್ಪ ಹೊತ್ತಿನಲ್ಲಿ ಕೋಟೆಯ ಗೋಡೆಗಳ ಮೇಲೆ ರಾಜನ ಸೈನಿಕರು ಪ್ರತ್ಯಕ್ಷರಾದರು. ಉಭಯ ಪಕ್ಷಗಳವರೂ ಯುದ್ಧಕ್ಕೆ ಸಿದ್ಧರಾಗಿದ್ದರು.

ಕತ್ತಲೆಯಾಯಿತು. ಅರ್ಧರಾತ್ರಿಯ ಹೊತ್ತಿನಲ್ಲಿ ವಿಜಯನು ಎದ್ದು ಶಿಬಿರದಲ್ಲಿ ತಿರುಗತೊಡಗಿದನು. ಅವನು ಗಸ್ತೀ ತಿರುಗುವವನಂತೆ ತಿರುಗುತ್ತ, ಕೋಟೆಯ ದ್ವಾರದ ಬಳಿಗೆ ಸೇರಿ ಚಿಕ್ಕ ಬಾಗಿಲ ಮೇಲೆ ಬೆರಳುಗಳಿಂದ ಮೆಲ್ಲನೆ ತಟ್ಟಿ ಶಬ್ದ ಮಾಡಿದನು.

"ಯಾರು ಅದು?" ಎಂದು ಒಳಗಿನಿಂದ ಯಾರೋ ಕೇಳಿದರು. "ನಾನು ಮಾಳವದ ಯುವ ರಾಜ, ವಿಜಯವರ್ಮ." ಎಂದು ವಿಜಯವರ್ಮ ಉತ್ತರ ಕೊಟ್ಟ.

ಆ ಕೂಡಲೇ ಚಿಕ್ಕ ಬಾಗಿಲು ತೆರೆದುಕೊಂಡಿತು. ಒಳಗಡೆ ಬಿಚ್ಚುಗತ್ತಿಯನ್ನು ಹಿಡಿದಿದ್ದ ಆಜಾನುಬಾಹುವಾದ ಸೈನಿಕನಿದ್ದ.

"ಕತ್ತಿಯನ್ನು ಕೆಳಗಿಳಿಸು. ನಾನು ಗುರುಕುಲದಿಂದ ವಿದ್ಯಾಭ್ಯಾಸ ಮುಗಿಸಿ, ಈ ಶತ್ರುಗಳ ಮಧ್ಯದಿಂದ ಬರುವುದು ಬಹಳ ಶ್ರಮವಾಯಿತು. ನಾನು ಅರಮನೆಗೆ ಹೋಗುತ್ತೇನೆ. ನನ್ನ ಜತೆ ಒಬ್ಬ ಸೈನಿಕನನ್ನು ಕಳುಹಿಸು." ಎಂದ ವಿಜಯ.



ಆ ದ್ವಾರಪಾಲಕನು ಬಾಗಿಲಿನ ಹತ್ತಿರ ಮತ್ತೊಬ್ಬ ಸೈನಿಕನನ್ನು ನಿಲ್ಲಿಸಿ, ವಿಜಯನ ಜತೆಯಲ್ಲಿ ರಾಜಭವನದವರೆಗೆ ಹೋದನು. ರಾಜಭವನದ ಕಾವಲುಗಾರರ ಹಿರಿಯ ವಿಜಯನ ಗುರುತು ಹಿಡಿದು ನಮಸ್ಕಾರ ಮಾಡಿ, "ಯಾವಾಗ ಬಂದಿರಿ ಪ್ರಭುಗಳೇ. ಒಳ್ಳೆಯ ಸಮಯಕ್ಕೇ ಬಂದಿರಿ!" ಎಂದನು. ಅದನ್ನು ಕೇಳಿದ ಮೇಲೆ ದ್ವಾರಪಾಲಕ ಸೈನಿಕನು ತೃಪ್ತಿಪಟ್ಟು ಹಿಂದಿರುಗಿ ಹೋದನು.

ತನ್ನ ಮಗನು ವಿದ್ಯೆಗಳನ್ನು ಮುಗಿಸಿಕೊಂಡು ಬಂದಿರುವ ಸಮಾಚಾರ ಕೇಳಿದ ಕೂಡಲೇ ಮಾರ್ತಾಂಡವರ್ಮ ಎದ್ದು ಬಂದು ಮಗನನ್ನು ಸ್ವಾಗತಿಸಿದನು.

"ನಾವು ಈಗಲೇ ಏಕಾಂತದಲ್ಲಿ ಮಾತಾಡಬೇಕು." ಎಂದು ವಿಜಯನು ಹೇಳಲು, ತಂದೆ ಅವನೊಡನೆ ಅನೇಕ ಪ್ರಶ್ನೆಗಳನ್ನು ಮಾಡುತ್ತ ಒಳಗಿನ ಕೋಣೆಗೆ ಕರೆದೊಯ್ದನು. ತಂದೆಯ ಯಾವ ಪ್ರಶ್ನೆಗಳಿಗೂ ವಿಜಯನು ಉತ್ತರ ಕೊಡದೆ ಮೌನವಾಗಿದ್ದನು.



ಇಬ್ಬರೂ ಒಂದು ಕೋಣೆಯಲ್ಲಿ ಕುಳಿತ ಬಳಿಕ ಮಾರ್ತಾಂಡವರ್ಮ ಮಗನನ್ನು ನೋಡಿ, "ಬಹಳ ಕಾಲದ ಮೇಲೆ ಬಂದಿದ್ದೀಯ. ಸಾವಕಾಶವಾಗಿ ಮಾತಾಡುವುದನ್ನು ಬಿಟ್ಟು ಒಮ್ಮೆಗೇ ರಹಸ್ಯವಾಗಿ ಮಾತಾಡುವಷ್ಟು ಅವಸರವೇನು ಬಂತು? ನಾಳೆಯ ವರೆಗೆ ತಾಳಿ ಆಮೇಲೆ ಗಂಭೀರ ವಿಷಯವನ್ನು ಕುರಿತು ಮಾತಾಡಿದರೆ ಆಗದೆ?" ಎಂದನು.

"ಈಗಿನ ಪರಿಸ್ಥಿತಿಯಲ್ಲಿ ಅದಕ್ಕೆಲ್ಲ ವ್ಯವಧಾನವಿಲ್ಲ. ನೀವು ಈಗಿಂದೀಗಲೇ ಈ ರಾಜ್ಯವನ್ನು ಬಿಟ್ಟು ಓಡಿ ಹೋಗಬೇಕು. ಪ್ರಜೆಗಳು ನಿಮ್ಮನ್ನೂ ನಿಮ್ಮ ಪರಿಪಾಲನೆಯನ್ನೂ ಮನಸ್ಫೂರ್ತಿಯಾಗಿ ದ್ವೇಷಿಸುತ್ತಾರೆ. ನನ್ನನ್ನು ಬಿಟ್ಟು ಓಡಿಬಿಡಿ" ಎಂದನು ವಿಜಯ.

ಮಾರ್ತಾಂಡವರ್ಮ ಅತ್ಯಂತ ಕೋಪದಿಂದ, "ದ್ರೋಹಿಯೇ, ಏನುಹೇಳಿದೆ? ನಾನು ಬದುಕಿರುವಾಗಲೇ ರಾಜನಾಗಬೇಕೆಂದು ನೋಡುವಿಯಾ? ಪ್ರಜೆಗಳು ನೀನೇ ರಾಜನಾಗಬೇಕೆಂದು ಆಶಿಸುತ್ತಿದ್ದಾರೇನು? ನನ್ನ ಮುಂದೆಯೇ ಹಾಗೆ ಹೇಳುವಷ್ಟು ಧೈರ್ಯವೇ ನಿನಗೆ? ಇಂಥ ಅವಿಧೇಯನಾದ ನಿನ್ನನ್ನು ಅಪ್ಪರವರೆಗೆ ಬಿಡುವೆನೆಂದುಕೊಂಡೆಯಾ?" ಎನ್ನುತ್ತ ಕತ್ತಿಯ ಮೇಲೆ ಕೈಹಾಕಿದನು.

"ಹೌದು. ಪ್ರಜೆಗಳ ಇಷ್ಟ ಇದುವೇ!" ಎನ್ನುತ್ತ ವಿಜಯನು ಮಿಂಚಿನ ವೇಗದಿಂದ ಹಾರಿ ಕತ್ತಿ ಹಿರಿದು ತಂದೆಯ ತಲೆಯನ್ನು ಕಡಿದುರುಳಿಸಿದನು. ಕ್ಷಣಗಳೊಳಗೆ ಈ ಸುದ್ದಿ ಅಂತಃಪುರದೊಳಗೆಲ್ಲಾ ಹರಡಿ, ಕೋಟೆಯೊಳಗೆಲ್ಲಾ ತಿಳಿಯಿತು. ಮಂತ್ರಿಗಳೂ, ಸೇನಾಧಿಪತಿಗಳೂ ಗಡಿಬಿಡಿಯಿಂದ ಬಂದು ವಿಜಯನೊಡನೆ ಚರ್ಚೆಗೆ ತೊಡಗಿದರು. ಆದರೆ ಯಾರೂ ವಿಜಯನನ್ನು ನಿಂದಿಸಲಿಲ್ಲ. ಕೆಲವರಂತೂ ದೊಡ್ಡ ರಕ್ತಪಾತವನ್ನು ನಿಲ್ಲಿಸಿದುದಕ್ಕೆ ಅವನನ್ನು ಮೆಚ್ಚಿಕೊಂಡರು. ಬೆಳಗಾಗುವವರೆಗೂ ಆಲೋಚನೆಗಳು ಸಾಗಿದುವು. ಬೆಳಗಾದಕೂಡಲೇ ವಿಜಯನಿಗೇ ರಾಜ್ಯಾಭಿಷೇಕವು ನಡೆದೂ ಬಿಟ್ಟಿತು. "ಕೋಟೆಯ ಹೊರಗೆ ಕೂಡಿರುವ ಸೇನೆಯೊಂದಿಗೆ ಸಂಧಿಯನ್ನು ಸೂಚಿಸಿರಿ. ಅವರ ನಾಯಕನಾದ ಸುಧೀರನನ್ನು ಸಗೌರವದಿಂದ ಆಹ್ವಾನಿಸಿ ಕರೆದುಕೊಂಡು ಬನ್ನಿರಿ" ಎಂದು ವಿಜಯನು ತನ್ನ ಮಂತ್ರಿಗಳಿಗೆ ಹೇಳಿದನು.

ಅನಂತರ ಎಲ್ಲವೂ ವಿಜಯನ ಎಣಿಕೆಯಂತೆಯೇ ನಡೆಯಿತು. ಸುಧೀರನು ರಾಜಭವನದೊಳಗೆ ಬಂದು, ವಿನಯನು ರಾಜನಾದುದಕ್ಕೆ ಒಪ್ಪಿಕೊಂಡು, ತನ್ನ ಕೈಯಿಂದಲೇ ಪ್ರಜಾಕಂಟಕ ರಾಜನನ್ನು, ತಂದೆಯೆಂದು ಕೂಡಾ ನೋಡದೆ ಕೊಂದನೆಂದು ತಿಳಿದು ಬಹಳ ಸಂತೋಷವನ್ನು ವ್ಯಕ್ತಪಡಿಸಿದನು.

"ನಿನ್ನಂತಹ ಪ್ರಜಾಭಿಮಾನವುಳ್ಳವನು ರಾಜನಾಗಿರುವುದು ಈ ದೇಶದ ಪ್ರಜೆಗಳು ಮಾಡಿದ ಪುಣ್ಯ. ನಿನ್ನ ಆಳ್ವಿಕೆ ಪ್ರಜಾರಂಜಕವಾಗಿರುತ್ತದೆಂದು ನಾನು ದೃಢವಾಗಿ ನಂಬುತ್ತೇನೆ" ಎಂದು ಸುಧೀರನು ವಿಜಯನೊಂದಿಗೆ ಹೇಳಿದ.

"ಆದಕ್ಕೆ ನಿನ್ನ ಸಹಾಯವೂ ನನಗೆ ಬೇಕು. ನೀನು ಸರ್ವ ಸೇನಾಧಿಪತಿಯಾಗಿದ್ದು, ಪರಿಪಾಲನೆಯಲ್ಲಿ ನನಗೆ ತಕ್ಕ ಸಲಹೆಗಳನ್ನು ಕೊಡುತ್ತಲೂ ಇರಬೇಕು." ಎಂದನು ವಿಜಯ. ಸುಧೀರನು ಕೂಡ ಆ ಮಾತಿಗೆ ಒಪ್ಪಿಗೆ ಕೊಟ್ಟ.

ಅಂದಿನಿಂದ ಆ ರಾಜ್ಯದ ಪಾಲನೆ ಸರಿಯಾಗಿ ಸಾಗ ತೊಡಗಿತು. ವಿಜಯನು ಗುರುಕುಲದಲ್ಲಿ ಕಲಿತುದು ವ್ಯಥಾ ಹೋಗಲಿಲ್ಲ. ಅವನು ಧರ್ಮ ನ್ಯಾಯಗಳು ತಪ್ಪದಂತೆ ಪ್ರಜಾರಂಜಕನಾಗಿ ಬಹಳ ಕಾಲ ರಾಜ್ಯವಾಳಿದನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ವಿಜಯನ ಪ್ರವರ್ತನೆಗೆ ಮೂಲಕಾರಣವೇನು? ಗುರುಗಳ ಆಶೀರ್ವಾದವೋ, ಸುಧೀರನ ಭಾಷಣವೋ? ಪ್ರಜೆಗಳ ಮೇಲಿರುವ ಅಭಿಮಾನವೋ? ತಂದೆಯ ಮೇಲಿನ ಕೋಪವೋ? ಈ ಪ್ರಶ್ನೆಗಳಿಗೆ ಸಮಾಧಾನ ತಿಳಿದು ಕೂಡಾ ಹೇಳದೆ ಹೋದರೆ ನಿನ್ನ ತಲೆಯೊಡೆದು ಹೋಗುತ್ತದೆ" ಎಂದು ಹೇಳಿ ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನೆಂದ; "ಸಾಧಾರಣವಾಗಿ ರಾಜರೆಲ್ಲಾ ನಿರಂಕುಶರು. ಬೋಧನೆಗಳು ಅವರನ್ನು ಬದಲಾಯಿಸಲಾರವು. ಪ್ರಜಾರಂಜಕವಾಗಿ ಪಾಲಿಸಬೇಕೆಂದು ಎಲ್ಲ ರಾಜರಿಗೂ ಗೊತ್ತಿದೆ. ಹಾಗೆ ಪಾಲಿಸದಿದ್ದರೆ ಅವರನ್ನು ಶಿಕ್ಷಿಸುವವರಿಲ್ಲವೆಂಬುದೂ ನಿಜವೇ. ಆದಕ್ಕೇ ರಾಜರು ನಿರಂಕುಶಪಾಲನೆಯನ್ನೇ ಮಾಡುತ್ತಾರೆ. ಆದರೆ ವಿಜಯನು ಸುಧೀರನನ್ನು ಕೂಡಿದ ಮೇಲೆ ಒಂದು ವಿಷಯ ತಿಳಿದುಕೊಂಡ. ಸರಿಯಾದ ನಾಯಕನಿದ್ದರೆ ಪ್ರಜೆಗಳು ರಾಜನನ್ನು ದಂಡಿಸಿಬಿಡುತ್ತಾರೆ. ಸುಧೀರನ ಭಾಷಣಗಳು ವಿಜಯನನ್ನು ನಿರಂಕುಶತೆಗೆ ಈಡಾಗದಂತೆ ನಿಗ್ರಹಿಸಿತ್ತು. ಇನ್ನು ಅವನು ತಂದೆಯನ್ನು ಏಕೆ ಕೊಂದನೆಂದರೆ, ಯುದ್ಧವು ನಡೆದರೆ ತಂದೆ ಸಾಯುವುದು ಖಂಡಿತವೆಂದು ನಂಬಿದ್ದ. ಅದಕ್ಕೇ ತಂದೆಯನ್ನು ರಾಜ್ಯಬಿಟ್ಟು ಓಡಲು ಹೇಳಿದ. ತಂದೆ ಕೇಳದೆ ಮಗನನ್ನೇ ಕೊಲ್ಲಲು ಹವಣಿಸಿದ. ಯುದ್ಧದಲ್ಲಿ ತಂದೆ ಸತ್ತರೆ ನಿಜಕ್ಕೂ ಸುಧೀರನೇ ರಾಜನಾಗುವನು. ತಂದೆಯನ್ನು ಕೊಂದ ಕೀರ್ತಿ ಅವನಿಗೇ ಹೋಗುತ್ತದೆ. ಆದುದರಿಂದ ಯುದ್ಧವೇ ನಡೆಯದೆ ವಿಜಯನೇ ರಾಜನಾಗಿ ಕುಳಿತು ಸುಧೀರನನ್ನು ಸೇನಾಧಿಪತಿಯನ್ನಾಗಿ ಮಾಡಿ, ಅವನನ್ನೂ ಮೆಚ್ಚಿಸಿ, ಸ್ವಾರ್ಥವನ್ನೂ ಸಾಧಿಸಿಕೊಂಡ."

ರಾಜನಿಗೆ ಹೀಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಯಲ್ಲಿ ನೇತಾಡ ತೊಡಗಿತು.

—(ಕೆ. ಆದಿಶೇಷ)



# ೧೫೯. ಹೊಸ ಅಗ್ನಿಪರ್ವತ

ಪ್ರಪಂಚದಲ್ಲಿ ಅಗ್ನಿ ಪರ್ವತಗಳು ಅನೇಕ ಕೋಟಿ ವರ್ಷಗಳಿಂದಲೇ ಇರುತ್ತವೆ. ಆದರೆ ಚಾರಿತ್ರಿಕ ಯುಗದಲ್ಲಿ ಹೊಸದಾಗಿ ಹುಟ್ಟಿದುವು ೬ ಅಗ್ನಿಪರ್ವತಗಳೇ. ಅವುಗಳಲ್ಲಿ ಆಧುನಿಕವಾದುದು "ಪರಿಕುಟಿನ್" ಅಗ್ನಿ ಪರ್ವತ. ಇದು ೧೯೪೩ ಫೆಬ್ರುವರಿ ೨೦ರ ದಿನ ಮೆಕ್ಸಿಕೋ ದೇಶದ ಒಂದು ಜೋಳದ ಹೊಲದಲ್ಲಿ ಹುಟ್ಟಿತು. ಆ ಹೊಲದಲ್ಲಿ ಅನಾದಿಕಾಲದಿಂದಿದ್ದ ಕುಂಟೆ ಯೊಳಗಿನಿಂದ ಭೂಗರ್ಭಧ್ವನಿ ಹೊರಡತೊಡಗಿ, ಅದರ ಸುತ್ತುಮುತ್ತಿನ ಪ್ರದೇಶ ಬೆಚ್ಚಗಾಯಿತು. ಫೆಬ್ರುವರಿ ೨೦ರ ದಿನ ಆ ಕುಂಟೆಯಿಂದ ಭೂಮಿಯಲ್ಲಿ ದೀರ್ಘವಾದೊಂದು ಸೀಳೂ, ಅದರೊಳಗಿನಿಂದ ಧೂಳು ಮತ್ತು ಸಿಳ್ಳಿನಂತಹ ಧ್ವನಿಯೂ ಹೊರಟಿತು. ಬೇಗದಲ್ಲೇ ಕುಂಟೆಯಲ್ಲೊಂದು ಗುಹೆಯುಂಟಾಗಿ ಅದರೊಳಗಿನಿಂದ ಮೊದಲು ಕೆಂಪಗೆ ಕಾದ ಕಲ್ಲುಗಳೂ ಆಮೇಲೆ ಶಿಲಾದ್ರವವೂ ಹೊರಗೆ ಬರತೊಡಗಿದುವು. ಭೂಕಂಪಗಳೂ, ಗುಡುಗುಗಳೂ, ಮಿಂಚುಗಳೂ ಕಾಣಿಸಿದುವು. ಆ ರಾತ್ರಿ ಹತ್ತು ಗಂಟೆಗೆ ೩೦ ಅಡಿ ಎತ್ತರದ "ಗೋಪುರವೇ" ಎದ್ದಿತು. ಮರುದಿನ ಅದು ೫೦ ಅಡಿಗಳಿಗೇರಿ, ೨೬ನೇ ತಾರೀಕಿಗೆ ೨೦೦ ಅಡಿಗಳಷ್ಟೆತ್ತರವಾಗಿ ಕ್ರಮವಾಗಿ ೧೫೦೦ ಅಡಿಗಳ ಗುಡ್ಡವಾಗಿ ಸುತ್ತಲೂ ವಿಸ್ತರಿಸತೊಡಗಿತು. ಅದರಿಂದ ಹೊರಟ ಲಾವಾ ಎಂಬ ಶಿಲಾದ್ರವವು ಸುತ್ತುಮುತ್ತಣ ಎರಡು ಗ್ರಾಮಗಳನ್ನೂ, ವಿಸ್ತೀರ್ಣವಾದ ಹೊಲವನ್ನೂ, ಅರಣ್ಯಗಳನ್ನೂ ನುಂಗಿತು.





# ಕಥೆಗಳ ಉಪಯೋಗ

ಅನೇಕ ವರ್ಷಗಳ ಹಿಂದೆ ಒಂದು ಊರಿನಲ್ಲಿ ಕೃಷ್ಣ ಶರ್ಮನೆಂಬ ಬ್ರಾಹ್ಮಣನಿದ್ದ. ಅವನು ವೇದಶಾಸ್ತ್ರ ಪುರಾಣ ಮೊದಲಾದ ಸಮಸ್ತವನ್ನೂ ಓದಿ ಕರೆ ಕಂಡಿದ್ದ. ಅವನು ಶ್ರೀಮಂತ ಪರಂಪರೆಯಲ್ಲಿ ಹುಟ್ಟಿದವನಾದುದರಿಂದ ಧನಸಂಪಾದನೆಗಾಗಿ ಯಾವ ಪ್ರಯತ್ನವನ್ನೂ ಮಾಡದೆ ಹಾಯಾಗಿ ತನ್ನಿಷ್ಟದಂತೆ ಕಾಲಕಳಿಯುತ್ತಿದ್ದ. ಸಾಯಂಕಾಲದಲ್ಲಿ ಅವನ ಮನೆಗೆ ಊರಿನವರು ಅನೇಕರು ಬಂದು ಸೇರುತ್ತಿದ್ದರು. ಇಷ್ಟಾಗೋಷ್ಟಿ ನಡೆಯುವಾಗ ಕೃಷ್ಣಶರ್ಮನು ಸಮಯೋಚಿತವಾಗಿ ಕಥೆಗಳನ್ನು ಹೇಳಿ ಎಲ್ಲರನ್ನೂ ಆನಂದಪಡಿಸುತ್ತಿದ್ದ.

ಕೃಷ್ಣಶರ್ಮನಿಗೆ ವೇದಶರ್ಮನೆಂಬ ಮಗನಿದ್ದ. ಅವನು ಕೂಡಾ ಶಾಸ್ತ್ರ ವಿದ್ಯೆಗಳಲ್ಲಿ ಪಾರಂಗತನಾಗಿ, ರಾಜಾಸ್ಥಾನದಲ್ಲಿ ಆಸ್ಥಾನಪಂಡಿತ ಪದವಿ ಪಡೆದಿದ್ದ. ಅವನಿಗೆ ತಂದೆಯ ರೀತಿ ಹಿಡಿಸುತ್ತಿದ್ದಿಲ್ಲ. ತಂದೆ ತನ್ನ ಪಾಂಡಿತ್ಯವನ್ನು ಉಪಯೋಗ ಪಡಿಸದೆ, ಮಾತು ಮಾತಿಗೂ ಕಥೆ ಹೇಳುತ್ತ ಕಾಲ ಕಳೆಯುವುದನ್ನು ನೋಡಿ ಅವನಿಗೆ ಬೇಸರವಾಗಿತ್ತು. ಒಂದುದಿನ ಅವನು, "ಅಪ್ಪಾ, ನೀವು ನಿಮ್ಮ ವಿಜ್ಞಾನವನ್ನು ಪ್ರಯೋಜನಕ್ಕೆ ತಾರದೆ, ಸುಮ್ಮನೆ ಏನೋ ಕಥೆ ಹೇಳಿ ಕಾಲ ಕಳೆಯುವುದರಿಂದ ಏನು ಸಾಧಿಸಿದ ಹಾಗಾಯಿತು ?" ಎಂದು ತಂದೆಯನ್ನು ಕೇಳಿದ.

"ಒಂದು ಸಣ್ಣ ಕಥೆಯಿಂದ ಎಷ್ಟೋ ಕೆಲಸ ಸಾಧಿಸಬಹುದು. ಬೇಕಾಗಿದ್ದರೆ ಇದಿರಾಳಿಯನ್ನು ನೋಯಿಸಬಹುದು. ಅರ್ಥವಾಗದ ಸಮಸ್ಯೆಯನ್ನು ಸುಲಭವಾಗಿ ಅರ್ಥವಾಗುವಂತೆ ಮಾಡಬಹುದು. ಚಿಂತೆಯಲ್ಲಿದ್ದವರಿಗೆ ಆನಂದವನ್ನುಂಟು ಮಾಡಿ ಉತ್ಸಾಹಗೊಳಿಸಬಹುದು. ಮೆದುಳಿಗೆ ಶಕ್ತಿಬರುವ ಹಾಗೆ ಮಾಡಬಹುದು. ಯಾರಿಗಾದರೂ ಪ್ರತೀಕಾರ ಮಾಡಿ ಬುದ್ಧಿ ಬರಿಸಲೂಬಹುದು. ಯೋಚಿಸಿ ನೋಡು, ಈ ಸಂಗತಿ ನಿನಗೂ ತಿಳಿಯಬಹುದು" ಎಂದನು ಕೃಷ್ಣಶರ್ಮ.

ತಂದೆಯ ಸಮಾಧಾನವು ವೇದಶರ್ಮನಿಗೆ ತೃಪ್ತಿಯಾಗಲಿಲ್ಲ. ಆದರೆ ಹೆಚ್ಚು ಹೇಳಲಾಗದೆ ಸುಮ್ಮನಾದ. ಆಮೇಲೆ ಒಂದುದಿನ ವೇದಶರ್ಮನಿಗೆ ರಾಜನ ಕೆಲಸದ ಮೇಲೆ, ಸಮುದ್ರ ಪ್ರಯಾಣ ಮಾಡಿ ದೂರ ದೇಶಕ್ಕೆ ಹೋಗಬೇಕಾಗಿ ಬಂತು. ಅವನೊಬ್ಬನನ್ನೇ ಅಷ್ಟು ದೂರ ಕಳಿಸಲು ಇಷ್ಟವಿಲ್ಲದೆ ದೇಶ ನೋಡುವ



ವ್ಯಾಜದಿಂದ ಕೃಷ್ಣಶರ್ಮನೂ ಅವನೊಂದಿಗೆ ಪ್ರಯಾಣ ಹೊರಟ. ಮಯೂರ ದೇಶವನ್ನು ಸೇರಿದ ಮಾರನೇದಿನ ವೇದಶರ್ಮನು ತಾನು ಬಂದ ಕೆಲಸವನ್ನು ಮುಗಿಸಿದ. ಅಲ್ಲಿ ಅವನ ಗೌರವಾರ್ಥವಾಗಿ ಒಂದು ಔತಣ ಕೂಟವನ್ನು ಏರ್ಪಡಿಸಲಾಗಿತ್ತು. ವೇದಶರ್ಮನೂ ಅವನ ತಂದೆಯೂ ಶಾಕಾಹಾರಿಗಳಾಗಿದ್ದು ಮದ್ಯವನ್ನು ಕೂಡ ಮುಟ್ಟಲಾರರೆಂದು ಅಲ್ಲಿಯ ರಾಜನಿಗೆ ಗೊತ್ತಿತ್ತು. ಆದುದರಿಂದ ಅವರಿಗೆ ತಕ್ಕ ಹಾಗೆಯೇ ಅಡಿಗೆ ಪದಾರ್ಥಗಳನ್ನು ತಯಾರಿಸಿದ್ದರು.

ಅಲ್ಲಿಯ ಆಸ್ಥಾನದ ವಿದೂಷಕನಿಗೆ ವೇದಶರ್ಮನನ್ನು ಸ್ವಲ್ಪ ಎಗ ತಾಳಿ ಮಾಡಬೇಕೆನಿಸಿತು. ಔತಣದ ಸಮಯದಲ್ಲಿ ಅವನು ವೇದಶರ್ಮನ ಬಳಿಗೆ ಬಂದು ಬಹಳ ವಿನಯದಿಂದ, "ಶಾಕಾಹಾರ ನಿಯಮಕ್ಕೆ ಒಳಪಡುವಂತಹ ಕೆಲವು ಮದ್ಯಗಳಿವೆ." ಎಂದು ಏನೇನೋ ಕೆಲವು ಪಾನೀಯಗಳ ಹೆಸರನ್ನು ಹೇಳಿ, "ಇವುಗಳಲ್ಲಿ ನೀವು ಯಾವುದು ತೆಗೆದುಕೊಳ್ಳುವಿರಿ ? ಅಪ್ಪಣೆಯಾಗಲಿ" ಎಂದು ಕೇಳಿದ. ವೇದಶರ್ಮ ಏನೋ ಸೋತವನ ಹಾಗೆ ಸಣ್ಣ ಮೋರೆ ಮಾಡಿಕೊಂಡು, ಅವಾವುದೂ ತನಗೆ ಗೊತ್ತಿಲ್ಲವೆಂದು ಹೇಳಿದ. ಅದನ್ನು ಕೇಳಿ ಮಹಾರಾಜನು ಮರ್ಯಾದೆಗಾಗಿ ನಗದೇ ಹೋದರೂ, ಅವನ ತುಟಿಗಳಲ್ಲಿ ನಗು ಕಾಣಿಸಿತು. ಉಳಿದವರು ಕೂಡಾ ವೇದಶರ್ಮನ ಅಜ್ಞಾನಕ್ಕೆ ಸ್ವಲ್ಪ ಸ್ವಲ್ಪ ನಕ್ಕರು. ಅದನ್ನು ಗಮನಿಸಿದಾಗ ವೇದಶರ್ಮನ ಮುಖ ಇನ್ನಿಷ್ಟು ಕಂದಿತು.

ಇದನ್ನು ನೋಡಿ ಕೃಷ್ಣಶರ್ಮನು ವಿದೂಷಕನೊಂದಿಗೆ, "ಇಲ್ಲಿ ಕೂಡಿದವರ ಈ ನಗು ನನಗೆ ಕೊಕ್ಕರೆಗಳ ನಗುವನ್ನು ನೆನಪಿಗೆ ತರುತ್ತದೆ" ಎಂದನು. "ಕೊಕ್ಕರೆಗಳ ನಗುವೆ ? ಅದೇನು ?" ಎಂದು ವಿದೂಷಕ ಕೇಳಿದ.

"ಮತ್ತೇನಿಲ್ಲ. ಹಿಂದೊಮ್ಮೆ ಮಾನಸ ಸರೋವರದಲ್ಲಿರುವ ರಾಜಹಂಸಗಳು ದಾರಿ ತಪ್ಪಿ, ಒಂದು ಕೊಕ್ಕರೆಗಳ ಗುಂಪಿನ ನಡುವೆ ಕೆಳಗಿಳಿಯಿತು. ಕೊಕ್ಕರೆಗಳು ಆ ಹಂಸದೊಂದಿಗೆ ಎಷ್ಟೋ ಪ್ರಶ್ನೆಗಳನ್ನು ಮಾಡಿದುವು. ಹಂಸ ಕೂಡ ಬಹಳ ತಾಳ್ಮೆಯಿಂದ ಅವುಗಳ ಪ್ರಶ್ನೆಗಳಿಗೆ ಪ್ರತ್ಯುತ್ತರ ಕೊಟ್ಟಿತು. 'ನೀನು ಏನನ್ನು ತಿನ್ನುವಿ ?' ಎಂದು ಕೊಕ್ಕರೆಗಳು ಕೇಳಲು 'ಎಳೇ ತಾವರೆದಂಟು ತಿನ್ನುತ್ತೇನೆ' ಎಂದು ಹಂಸ ಉತ್ತರ ಹೇಳಿತು. 'ಏಡಿ ಎರೆ ಹುಳಗಳು ಚೆನ್ನಾಗಿರುತ್ತವಲ್ಲ ? ತಿನ್ನುವುದಿಲ್ಲವೆ ?' ಎಂದು ಕೊಕ್ಕರೆಗಳು ಕೇಳಿದುವು. ಅವುಗಳ ಸಂಗತಿ ತನಗೆ ಗೊತ್ತಿಲ್ಲವೆಂದು ಹಂಸವು ಹೇಳಿತು. ಅದನ್ನು ಕೇಳಿ ಕೊಕ್ಕರೆಗಳು ನಕ್ಕವು" ಎಂದ ಕೃಷ್ಣಶರ್ಮ.

ಈ ಕಥೆ ಕೇಳಿ ಮಹಾರಾಜನೂ ಉಳಿದವರೂ ನಿರಾತಂಕವಾಗಿ ನಕ್ಕರು. ಎಲ್ಲರ ಮುಖದಲ್ಲಿಯೂ ಉತ್ಸಾಹವೆದ್ದಿತು. ಆಗ ವಿದೂಷಕನ ಮುಖ ಬಾಡಿ ಹೋಯಿತು. ಔತಣ ಮುಗಿದ ಮೇಲೆ ವಿದೂಷಕನು

ತಂದೆ ಮಗಂದಿರನ್ನು ತನ್ನ ಮನೆಗೆ ಊಟಕ್ಕೆ ಆಹ್ವಾನಿಸಿದನು. ಆ ರಾತ್ರಿ ಅವರು ವಿದೂಷಕನ ಮನೆಗೆ ಊಟಕ್ಕೆ ಹೋದರು. ವಿದೂಷಕನು ಇನ್ನೂ ಅನೇಕ ಪ್ರಮುಖರನ್ನು ಆಹ್ವಾನಿಸಿದ್ದ. ಎಲ್ಲರೊಂದಿಗೆ ಮುಖ್ಯ ಅತಿಥಿಗಳಾದ ತಂದೆ ಮಗಂದಿರಿಗೆ ಕೂಡಾ ಗೋಮಾಂಸವನ್ನು ಬಡಿಸಿದರು. ಅದನ್ನು ನೋಡಿ ಕೃಷ್ಣಶರ್ಮನು ಅಭ್ಯಂತರ ಹೇಳಿದನು.

ವಿದೂಷಕನು ತಿಳಿಯದೆ ತಪ್ಪಾಗಿ ಹೋಯಿತೆಂದು ಒಪ್ಪಿಕೊಂಡು, ಆಮೇಲೆ ಹೀಗೆಂದ:

"ನಾನು ಕೂಡಾ ಈ ದೇಶಕ್ಕೆ ಬರುವ ಮೊದಲು ಶಾಕಾಹಾರಿಯಾಗಿದ್ದೆ. ನಿಮ್ಮ ಹಾಗೆಯೇ ಮದ್ಯ ಮಾಂಸ ಮುಟ್ಟುತ್ತಿರಲಿಲ್ಲ. ಈ ದೇಶದಲ್ಲಿ ಸ್ಥಿರಪಟ್ಟ ಮೇಲೆ ದೇಶಕಾಲ ಪರಿಸ್ಥಿತಿಗೆ ತಕ್ಕ ಹಾಗೆ ನನ್ನ ಅಭ್ಯಾಸವನ್ನು ಬದಲಾಯಿಸಿಕೊಂಡೆ. ನೀವು ಕೂಡಾ ಹಾಗೇಕೆ ಮಾಡಬಾರದು ?" ಇದಕ್ಕೆ ಏನು ಉತ್ತರ ಕೊಡುವನೋ ಎಂದು ಎಲ್ಲರೂ ಕೃಷ್ಣಶರ್ಮನನ್ನು ಕುತೂಹಲದಿಂದ ನೋಡುತ್ತಿದ್ದರು.

"ಸ್ವಂತ ಅಭ್ಯಾಸಗಳನ್ನು ಬದಲಾಯಿಸಿಕೊಳ್ಳುವುದು ಅವರವರ ಸ್ಥಾಯಿಗೆ ತಕ್ಕ ಹಾಗಿರುತ್ತದೆ. ಹಿಂದೆ ಒಂದು ಸಿಂಹವು ಏನೋ ತಪ್ಪಿನಿಂದಾಗಿ ಒಂದು ದನಗಳ ಕೊಟ್ಟಿಗೆಯಲ್ಲಿ ಸಿಕ್ಕಿಬಿದ್ದುಬಿಟ್ಟಿತು. ಆ ಕೊಟ್ಟಿಗೆಯಲ್ಲಿ ಒಂದೇ ಒಂದು ದನವೂ ಇರಲಿಲ್ಲ. ಹುಲ್ಲಿನ ರಾಶಿಮಾತ್ರ ಹೇರಳವಾಗಿತ್ತು. ಸಿಂಹಕ್ಕೆ ಹೊರಗೆ ಬರಲು ಸಾಧ್ಯವಾಗದೆ ಹೋಗಿತ್ತು. ಅದು ಹಸಿವೆಯಿಂದ ಪೇಚಾಡುತ್ತ ಹದಿನೈದು ದಿನಗಳವರೆಗೆ ಆ ಕೊಟ್ಟಿಗೆಯಲ್ಲಿದ್ದು ಪ್ರಾಣಿಗಳ ಮಾಂಸಕ್ಕಾಗಿ ನೋಡುತ್ತಿತ್ತೇ ಹೊರತು, ಹುಲ್ಲನ್ನು ಮೂಸಿ ಕೂಡ ನೋಡಲಿಲ್ಲ. ಸಿಂಹದ ಸ್ಥಾಯಿ ಅಂಥಾದ್ದು" ಎಂದ ಕೃಷ್ಣಶರ್ಮ.

ಈ ಕಥೆಯಿಂದ ವಿದೂಷಕನಿಗೆ ಎರಡನೇ ಸಾರಿ ಕೂಡಾ ಪರಾಭವವಾಯಿತು. ಅವನು ಕೃಷ್ಣಶರ್ಮನೊಂದಿಗೆ ಕ್ಷಮಾಪಣೆ ಕೇಳಿಕೊಂಡು, ಅವನಿಗೂ ಅವನ ಮಗನಿಗೂ ಆ ಕೂಡಲೇ ಬೇರೆ ಭೋಜನದ ಏರ್ಪಾಡು ಮಾಡಿಸಿದನು.



ಕಥೆಗಳ ಪ್ರಭಾವ ವೇದಶರ್ಮನಿಗೆ ಗೊತ್ತಾಗುತ್ತ ಬಂತು. ಹಿಂದಿರುಗಿ ಪ್ರಯಾಣ ಮಾಡುವಾಗ ಅವನು ತಂದೆಯನ್ನು ಮೆಚ್ಚಿಕೊಂಡು, "ನೀವು ಹೇಳಿದ ಕಥೆಗಳು ನನಗೂ ಗೊತ್ತಿತ್ತು. ಆದರೆ ಅವುಗಳನ್ನು ಹೀಗೆ ಉಪಯೋಗಿಸಬಹುದೆಂದು ಗೊತ್ತಿರಲಿಲ್ಲ. ಕಥೆಗಳಿಂದ ಇದಿರಾಳಿಗೆ ತಕ್ಕ ಹೊಡೆತ ಕೊಡುವುದನ್ನೂ, ಮೆದುಳಿಗೆ ಪೋಷಣೆ ನೀಡುವುದನ್ನೂ ನಿಮ್ಮಿಂದ ನೋಡಿದೆ. ದಿನಾ ನೀವು ಹೀಗೆ ಎಷ್ಟೋ ಜನರಿಗೆ ಸಂತೋಷ ಉಂಟು ಮಾಡುತ್ತೀರಿ. ನನಗೊಂದು ಸಮಸ್ಯೆಯಿದೆ. ಆಸ್ಥಾನದಲ್ಲಿ ನನ್ನ ಕೈಕೆಳಗೆ ಎಷ್ಟೋ ಉದ್ಯೋಗಸ್ಥರಿದ್ದಾರೆ. ಅವರ ಮೇಲೆ ನಾನು ಪ್ರೇಮದಿಂದ, ಅಭಿಮಾನವಿಟ್ಟು ನಡೆದು ಕೊಳ್ಳುತ್ತೇನೆ. ಆದರಿಂದಾಗಿ ಅವರು ನನ್ನನ್ನು ಸಣ್ಣ ದೃಷ್ಟಿಯಿಂದ ನೋಡುತ್ತ ಗೌರವ ಕೊಡುವುದನ್ನು ಕೂಡ ಬಿಟ್ಟರು. ಆದುದರಿಂದ ನಾನೀಗ ಅವರ ಮೇಲೆ ಕಠಿನವಾಗಿ ವರ್ತಿಸುತ್ತಿದ್ದೇನೆ. ನನ್ನನ್ನು ನೋಡಿ ಅವರೆಲ್ಲ ಈಗ ಹೆದರುತ್ತಿದ್ದಾರೆ. ಇದೇನೂ ನನಗೆ ತೃಪ್ತಿಯಾಗಿಲ್ಲ. ಅವರಿಗೆ ನನ್ನ ಮೇಲೆ ಗೌರವ ವಿರಬೇಕೇ ಹೊರತು ಭಯವಿರಬಾರದು. ಏನು ಮಾಡಲಿ ? " ಎಂದ.

ಕೃಷ್ಣಶರ್ಮ ನಕ್ಕು ಹೀಗೆ ಹೇಳಿದ: "ನಿನ್ನ ಈ ಸಮಸ್ಯೆಯೇ ಒಂದುಸಾರಿ ಒಂದು ಹಾವಿಗೆ ಬಂತು. ಅದು ಒಬ್ಬ ಮುನಿಯ ಬಳಿಗೆ ಹೋಗಿ, ಪ್ರಜೆಗಳಿಗೆ ನಾನೆಂದರೆ ಅಸಹ್ಯವಿರಬಾರದು, ಭಯವೂ ಇರಬಾರದು ; ಇದಕ್ಕೆ ತಕ್ಕುದಾದ ಒಂದು ಮಾರ್ಗ ತೋರಿಸುವಿರಾ ? ' ಎಂದು ಕೇಳಿತು. 'ಯಾರಿಗೂ ಹಾನಿ ಮಾಡದಿದ್ದರೆ ಸರಿ' ಎಂದು ಮುನಿ ಹೇಳಿದ. ಹಾಗೆಯೇ ಹಾವು ಸಾಧುವಾಗಿ ಸುಮ್ಮನಿರತೊಡಗಿತು. ಈ ಹಾವಿನ ಸಾಧುಭಾವ ಎಲ್ಲರಿಗೂ ತಿಳಿದುಹೋಯಿತು. ಸಣ್ಣ ಮಕ್ಕಳು ಕೂಡಾ ಅದನ್ನು ಹಿಡಿಸಿ ಕಾಡಿಸಿ ಚೇಷ್ಟೆಗೆ ತೊಡಗಿದರು. ಅದರಿಂದ ಅದು ಬಹಳ ಕಷ್ಟಪಡುತ್ತ ಬಿದ್ದಿತ್ತು. ಒಂದುದಿನ ಅದೇ ಮುನಿ ಅದನ್ನು ನೋಡಿ, ಕನಿಕರದಿಂದ ಅದರ ಸಂಗತಿ ತಿಳಿದು "ನೀನು ನನ್ನ ಮಾತನ್ನು ತಪ್ಪು ಅರ್ಥಮಾಡಿಕೊಂಡೆಯಪ್ಪಾ. ಯಾರಿಗೂ ಕಚ್ಚಿ ಹಾನಿ ಮಾಡಬೇಡವೆಂದೇನೇ ಹೊರತು ಭುಸುಗುಟ್ಟ ಬೇಡವೆಂದು ಹೇಳಿದೆನೇ ? ನೀನು ಯಾರಿಗೂ ಹಾನಿ ಮಾಡಬೇಡ. ಆದರೆ ನಿನಗೆ ಯಾರಾದರೂ ತಂಟೆಗೆ ಬಂದರೆ ಭುಸುಗುಟ್ಟು" ಎಂದನು.

ಈ ಕಥೆಯಿಂದ ವೇದಶರ್ಮನಿಗೆ ತನ್ನ ಕೆಳಗಿನವರೊಂದಿಗೆ ತಾನು ಹೇಗೆ ವರ್ತಿಸಬೇಕೆಂದು ತಿಳಿದು ಹೋಯಿತು. ಅದು ಮೊದಲು ವೇದಶರ್ಮನು ಕಥೆಗಳಿಂದಾಗುವ ಲಾಭವನ್ನು ಗುರುತಿಸಿ, ತಾನು ಕೂಡಾ ಕಥೆಗಳನ್ನು ಹೇಳಲು ಪ್ರಾರಂಭಿಸಿದನು.





# ಎರಡು ವಜ್ರಗಳು

ಒಂದು ಕಾಲದಲ್ಲಿ ಕರ್ಮಾಪುರದ ರಾಜನಾದ ಬೋಪದೇವನಿಗೆ ಗಂಡು ಮಕ್ಕಳಿರಲಿಲ್ಲ. ಅವಳಿಜವಳಿಯಾಗಿ ಹುಟ್ಟಿದ ಇಬ್ಬರು ಕುಮಾರಿಯರು ಮಾತ್ರ ಇದ್ದರು. ಆದರೆ ಇಬ್ಬರೂ ಒಂದೇ ರೀತಿಯಾಗಿರಲಿಲ್ಲ. ಒಬ್ಬಳು ಬೆಳ್ಳಗಿದ್ದರೆ ಇನ್ನೊಬ್ಬಳು ಕಪ್ಪಗಿದ್ದಳು. ಬೆಳ್ಳಗಿನ ಕುಮಾರಿಯ ಹೆಸರು ಶ್ವೇತೆ. ಇನ್ನೊಬ್ಬಳ ಹೆಸರು ಕೃಷ್ಣೆ. ಹೀಗೆ ಬಣ್ಣಗಳಲ್ಲಿ ಮುಖ್ಯ ವ್ಯತ್ಯಾಸವಿತ್ತೇ ಹೊರತು ಉಳಿದ ವಿಷಯಗಳಲ್ಲಿ ಇಬ್ಬರಿಗೂ ಒಂದೇ ಹೋಲಿಕೆಯಿತ್ತು.

ತಂದೆ ತಾಯಿಗಳ ಹಾಗೂ ರಾಜಪರಿವಾರದವರ ಅಕ್ಕರೆಗೆ ಪಾತ್ರರಾಗಿ ಶ್ವೇತೆಯೂ ಕೃಷ್ಣೆಯೂ ಬೆಳೆಯುತ್ತ ಹತ್ತು ವರ್ಷ ವಯಸ್ಸಿನ ಹುಡುಗಿಯರಾದರು. ಆಗಲೇ ಆಗಬಾರದ ಘಟನೆಯೊಂದು ಘಟಿಸಿಬಿಟ್ಟಿತು.

ಒಂದುದಿನ ಶ್ವೇತೆಯೂ ಕೃಷ್ಣೆಯೂ ಉದ್ಯಾನದಲ್ಲಿ ವಿಹರಿಸಿಕೊಂಡಿರುವಾಗ, ಅಕಸ್ಮಾತ್ತಾಗಿ ಗಾಳಿಯೊಂದು ಭುರ್ರನೇ ಬೀಸಿತು. ಆಗ ಒಂದು ಮರದ ಮೇಲಿದ್ದ ಪಕ್ಷಿಯ ಗೂಡು ಅವರ ಕಾಲಿನ ಮುಂದೆ ದೊಪ್ಪನೆ ಬಿತ್ತು. ಅದರಿಂದ ಇಬ್ಬರು ಹುಡುಗಿಯರೂ ಹೆದರಿ ಗಟ್ಟಿಯಾಗಿ ಅಳತೊಡಗಿದರು. ಅದನ್ನು ಕೇಳಿ ಪರಿಚಾರಕರು ಗಾಬರಿಯಾಗಿ ಓಡುತ್ತಾ ಬಂದು ಅಲ್ಲಿ ಬಿದ್ದು ಚೆದರಿದ ಪಕ್ಷಿಯ ಗೂಡನ್ನು ನೋಡಿದರು. ಅದರಲ್ಲಿ ಎರಡು ಮೊಟ್ಟೆಗಳಿದ್ದುವು. ಪರಿಚಾರಕರು ಆ ಗೂಡನ್ನು ಮೊಟ್ಟೆಗಳೊಂದಿಗೆ ಮಲ್ಲಿಗೆ ಪೊದರಿನೊಳಗೆ ಬಿಸುಟು, ರಾಜಕುಮಾರಿಯರನ್ನು ಎತ್ತಿಕೊಂಡು ಸಮಾಧಾನಪಡಿಸುತ್ತ ರಾಜಭವನದೊಳಗೆ ಕರೆದುಕೊಂಡು ಹೋದರು.

ಹುಡುಗಿಯರ ಅಳು ನಿಂತರೂ ಅವರ ಕಳೆ ಹೊರಟುಹೋಯಿತು. ಭಯದಿಂದ ಇಬ್ಬರು ಹುಡುಗಿಯರೂ ಕಳೆಗೆಟ್ಟು ಅಡಿಗಡಿಗೆ ಕಿರಿಚಿಕೊಳ್ಳುತ್ತಿದ್ದರು. ಜ್ವರವೂ ತಗಲಿತು. ಔಷಧ ಚಿಕಿತ್ಸೆಗಳಿಂದ ಮಕ್ಕಳ ಜ್ವರ ತಗ್ಗುವ ಬದಲಿಗೆ ಹೆಚ್ಚುತ್ತಾ ಇತ್ತು. ಚಿಂತೆಗೊಂಡ ರಾಜನಿಗೆ ಒಂದುದಿನ ರಾತ್ರಿ ಒಂದು ವಿಚಿತ್ರವಾದ ಸ್ವಪ್ನ ಬಿತ್ತು.

ಆ ಸ್ವಪ್ನದಲ್ಲಿ ತನ್ನ ಉದ್ಯಾನದಲ್ಲಿ ಪಂಚರಂಗೀ ಪಕ್ಷಿಯೊಂದು ತನ್ನನ್ನೇ ಗಮನಿಸುವುದನು ನೋಡಿದನು. ಆ ಪಕ್ಷಿ ಮಾನವ ಭಾಷೆಯಲ್ಲಿ ರಾಜನೊಂದಿಗೆ ಹೀಗೆ ಹೇಳಿತು:

ಪಿ. ಸಿ. ಸರ್ಕಾರ್, ಇಂದ್ರಜಾಲಿಕರು



"ರಾಜಾ, ನಾನು ದೇವತಾ ಪಕ್ಷಿ. ನಾನು ಈ ಉದ್ಯಾನದಲ್ಲಿ ಒಂದು ಮರದ ಮೇಲೆ ಗೂಡುಗಟ್ಟಿ ಅದರಲ್ಲಿ ಎರಡು ಮೊಟ್ಟೆಗಳನ್ನಿಟ್ಟೆನು. ಅವುಗಳಿಗೆ ಕಾವು ಕೊಟ್ಟು, ಮರಿ ಮಾಡಿ ನಿನ್ನ ಕುಮಾರಿಯರಿಗೆ ಬಹುಮಾನ ಕೊಡೋಣವೆಂದು ಆಲೋಚಿಸಿದ್ದೆ. ಆದರೆ ಗಾಳಿ ಬಂದು ನನ್ನ ಗೂಡನ್ನು ಕೆಳಗೆ ಬೀಳಿಸಿತು. ಮೂಢರಾದ ನಿನ್ನ ಪರಿಚಾರಕರು ಗೂಡಿನೊಂದಿಗೆ ಆ ಮೊಟ್ಟೆಗಳನ್ನು ಮಲ್ಲಿಗೆ ಪೊದರಿನೊಳಗೆ ಬಿಸುಟುಬಿಟ್ಟರು."

ಇದನ್ನು ಕೇಳಿ ರಾಜನು, "ನಾನು ಈಗಲೇ ಆ ಮೊಟ್ಟೆಗಳನ್ನು ಹುಡುಕಿಸಿ ತರಿಸುತ್ತೇನೆ" ಎಂದನು. ಅದಕ್ಕೆ ಪಂಚರಂಗೀ ಪಕ್ಷಿ, "ಅದೀಗ ಸಾಧ್ಯವಿಲ್ಲ. ಅವು ಕಾವುಗೊಂಡು ಒಡೆದು ಮರಿಗಳು ಹೊರಗೆ ಬಂದು ಹಾರಿ ಹೋಗಿಯೂ ಆಯಿತು. ಆ ಪಕ್ಷಿಗಳು ಈಗ ನಿನ್ನ ರಾಜ್ಯದ ಪಶ್ಚಿಮ ದಿಕ್ಕಿನಲ್ಲಿರುವ ನಿಟಾರು ಬೆಟ್ಟದ ಶಿಖರದ ಮೇಲಿವೆ. ನೀನೇ ಪ್ರಯತ್ನಪಟ್ಟು ಆ ಶಿಖರಕ್ಕೆ ಹೋಗಿ ಅವುಗಳನ್ನು ತೆಗೆದುಕೊಂಡು ಬಂದು ಅವುಗಳಿಗೆ ಪ್ರಿಯವಾಗಿರುವ ಆಹಾರವನ್ನು ಕೊಡಬೇಕು. ಅದರಿಂದ ಅವುಗಳು ತೃಪ್ತವಾದರೆ ನಿನಗೆ ಎರಡು ಮೊಟ್ಟೆಗಳನ್ನು ಕೊಡುತ್ತವೆ. ಐದು ವರ್ಷಗಳ ಮೇಲೆ ಆ ಮೊಟ್ಟೆಗಳು ವಜ್ರಗಳಾಗಿ ಬದಲಾಯಿಸುತ್ತವೆ. ಆ ಪಕ್ಷಿಗಳನ್ನು ನೀನು ಎತ್ತಿಕೊಂಡು ಬಂದ ಕೂಡಲೇ ನಿನ್ನ ಮಕ್ಕಳ ಜ್ವರ ತಗ್ಗಿ ಹೋಗುತ್ತದೆ. ಅದುವರೆಗೂ ನಿನ್ನ ಮಕ್ಕಳ ಜ್ವರ ಇದ್ದ ಹಾಗೆಯೇ ಇರುತ್ತದೆ." ಎಂದಿತು.

"ಆ ಬೆಟ್ಟದ ಶಿಖರವು ನೆಟ್ಟಗೆ ನಿಟಾರಾಗಿದೆ. ಮನುಷ್ಯರಿಗೆ ಏರಲು ಸಾಧ್ಯವಿಲ್ಲ. ಈ ವರೆಗೂ ಯಾರೂ ಅದರ ಮೇಲೆ ಹತ್ತಿದವರಿಲ್ಲ. ಏನು ಮಾಡಲಿ ? " ಎಂದ ರಾಜ.

"ನೀನು ಹೇಗಾದರೂ ಹತ್ತಲೇಬೇಕು. ಹೇಗೆ ಹತ್ತುವೆಯೋ ನಾನರಿಯೆ. ನೀನು ಆ ಪಕ್ಷಿಗಳನ್ನು ತರುವವರೆಗೂ ನಿನ್ನ ಮಕ್ಕಳ ಜ್ವರವು ತಗ್ಗುವುದಿಲ್ಲ. ಇನ್ನೊಂದು ಸಮಾಚಾರವೇನೆಂದರೆ, ಅವು ಕೊಡುವ ಮೊಟ್ಟೆಗಳು ವಜ್ರಗಳಾದಾಗ, ಒಂದು ಬೆಳ್ಳಗಿರುತ್ತದೆ. ಇನ್ನೊಂದು ವಜ್ರ ಗುಲಾಬಿ ರಂಗಿನಲ್ಲಿರುತ್ತದೆ. ಗುಲಾಬೀ ರಂಗಿನ ವಜ್ರವನ್ನು ಶ್ವೇತಕುಮಾರಿ ತೆಗೆದುಕೊಳ್ಳಬೇಕು. ಬೆಳ್ಳಗಿನ ವಜ್ರ ಕೃಷ್ಣಕುಮಾರಿಗೆ ಕೊಡು. ಹಾಗೆ ಮಾಡದೆ ಹೋದರೆ ಇಬ್ಬರಿಗೂ ಕಷ್ಟಗಳು ಬರುತ್ತವೆ. ನೆನಪಿಟ್ಟುಕೋ. ಇನ್ನು ನಾನು ಕಾಣಿಸಲಾರೆ." ಎಂದು ಹೇಳಿ ಪಕ್ಷಿ ಮಾಯವಾಯಿತು.

ಬೋಪದೇವನು ಕೂಡಲೇ ಎಚ್ಚೆತ್ತು ಕನಸನ್ನು ನೆನೆಯುತ್ತ, ಅದನ್ನೆಲ್ಲಾ ರಾಣಿಗೂ ಹೇಳಿದನು. ಬೆಳಗಾದ ಮೇಲೆ ಅವನು ತನ್ನ ಮಂತ್ರಿಗಳನ್ನೆಲ್ಲ ಸಮಾವೇಶಗೊಳಿಸಿ ಅವರೊಂದಿಗೆ ತನ್ನ ಸ್ವಪ್ನವನ್ನು ಕುರಿತು ಚರ್ಚಿಸಿದನು.

ಬೆಟ್ಟ ಹತ್ತುವ ಉಪಾಯವನ್ನು ಅವರಾರೂ ಹೇಳಲಾರದೆ ಹೋದರು. ಕಟ್ಟಕಡೆಗೆ ರಾಜನು

ದೇವಾಲಯಕ್ಕೆ ಹೋಗಿ ದೇವರನ್ನೇ ಶರಣುಹೊಕ್ಕು ಪ್ರಾರ್ಥನೆ ಮಾಡತೊಡಗಿದನು.

ಅಕಸ್ಮಾತ್ತಾಗಿ ದೇವರ ವಿಗ್ರಹದ ಕೆಳ ಭಾಗದಿಂದ ಒಂದು ಉಡು ಈಚೆಗೆ ಬಂದು ಗೋಡೆಯ ಮೇಲೇರಿ ಮತ್ತೆ ಇಳಿದು ರಾಜನ ಬಳಿಯಲ್ಲಿ ಬಂದು ನಿಂತಿತು.

ಅದನ್ನು ನೋಡಿ ರಾಜಪುರೋಹಿತನು ರಾಜನೊಂದಿಗೆ, "ಮಹಾರಾಜರೆ, ದೇವರ ಅನುಗ್ರಹವಾಗಿದೆ. ನಿಮಗೆ ಸಹಾಯಕವಾಗಿ ಈ ಉಡುವನ್ನು ಕಳುಹಿಸಿದ್ದಾನೆ. ಇನ್ನು ನಿಮ್ಮ ಸಮಸ್ಯೆ ಬಗೆ ಹರಿದಂತೆಯೇ ಸರಿ" ಎಂದನು.

"ಈ ಉಡುವು ನನಗೆ ಸಹಾಯ ಮಾಡುವ ಬಗೆ ಹೇಗೆ ಶಾಸ್ತ್ರಿಗಳೇ?" ಎಂದು ರಾಜನು ಕೇಳಿದ. "ಹೇಗೆಂಬುದನ್ನು ಅದೇ ತೋರಿಸಿತಲ್ಲ? ಕೋಟೆಯ ಗೋಡೆಗಳನ್ನು ಹತ್ತುವುದರಲ್ಲಿ ಉಡುವಿಗೆ ಸಮಾನವಾದುದು ಬೇರೊಂದಿಲ್ಲ. ಅದರ ಹಿಡಿತಕ್ಕೆ ಯಾವುದೂ ಇದಿರಿಲ್ಲ. ಅದರ ನಡುವಿಗೆ ಹಗ್ಗ ಕಟ್ಟಿ ಬೆಟ್ಟದ ಶಿಖರಕ್ಕೆ ಕಳುಹಿಸಿದರೆ ಆ ಹಗ್ಗವನ್ನು ಹಿಡಿದುಕೊಂಡು ನೀವು ನಿಶ್ಚಿಂತೆಯಿಂದ ಮೇಲೆ ಏರಬಹುದು." ಎಂದ ರಾಜಪುರೋಹಿತ.

ಅದರಂತೆ ರಾಜನು ಆ ಬೆಟ್ಟದ ಕಡೆಗೆ ಹೊರಟನು. ಯಾವುದಕ್ಕೂ ಒಳ್ಳೆಯದೆಂದು ರಾಜನು ಶಿಖರದ ಕೆಳಭಾಗದಲ್ಲಿ, ಮೇಲಿನಿಂದ ಕೆಳಗೆ ಬಿದ್ದರೆ ತಾಳಿಕೊಳ್ಳುವಷ್ಟು ಬಲವಾದ ಬಲೆಯನ್ನು ಅಳವಡಿಸಿ ಇಡಿಸಿದನು. ಅನಂತರ ಒಂದುದಿನ ಬೆಳಗ್ಗೆ ರಾಜನು ತನ್ನ ಖಡ್ಗವನ್ನೂ, ಆಹಾರವನ್ನೂ, ನೀರನ್ನೂ ತೆಗೆದುಕೊಂಡು ಏರಲು ಸಿದ್ಧನಾದನು. ಮೊದಲು ಉಡುವಿನ ನಡುವಿಗೆ ಹಗ್ಗ ಕಟ್ಟಿ ಶಿಖರದ ಮೇಲಕ್ಕೆ ಕಳುಹಿಸಲಾಯಿತು.

ಅದು ಮೇಲಕ್ಕೆ ಹೋದ ಮೇಲೆ ಇಬ್ಬರು ಸೈನಿಕರು ಹಗ್ಗವನ್ನು ಎಳೆದು ಹಿಡಿದುಕೊಂಡರು. ಉಡು ಮೇಲಿನ ಬಂಡೆಯೊಂದನ್ನು ಕಚ್ಚಿ ಹಿಡಿದು ನಿಂತಿತು. ರಾಜನು ದೇವರನ್ನು ಧ್ಯಾನಿಸಿ ಆ ಹಗ್ಗವನ್ನು ಹಿಡಿದುಕೊಂಡು ಮೇಲಕ್ಕೆ ಹೋದನು. ಕೆಳಗೆ ರಾಜನ ಕಡೆಯುವರೂ ರಾಣಿಯೂ ಏನಾಗುವುದೋ ಎಂದು





ಹೆದರುತ್ತ ದೇವರನ್ನು ನೆನೆಯುತ್ತ ರಾಜನು ಇಳಿಯುವುದನ್ನೇ ಕಾಯುತ್ತಾ ನಿಂತಿದ್ದರು.

ರಾಜನು ಶಿಖರದ ಮೇಲೆ ತಲುಪಿದಾಗ ಸೂರ್ಯನು ಅಸ್ತಮಿಸಿ ಪೂರ್ಣಚಂದ್ರನು ಉದಯಿಸಿದ್ದನು. ಮೇಲೆ ಹೋದ ಮೇಲೆ ರಾಜನು ಉಡುವಿನ ನಡುವಿನಿಂದ ಹಗ್ಗವನ್ನು ಬಿಚ್ಚಿ ಅದರ ಕೊನೆಯನ್ನು ಬಲವಾದ ಕಲ್ಲಿಗೆ ಕಟ್ಟಿಟ್ಟನು. ಅನಂತರ ಸುತ್ತಲೂ ನೋಡಿದಾಗ ಚಂದ್ರಕಿರಣದಲ್ಲಿ ಅವನಿಗೊಂದು ಗಿಡ್ಡಗಿನ ಮರವು ಕಾಣಿಸಿತು. ಅದರ ಬಳಿಗೆ ಹೋಗಿ ನೋಡಲು, ಮರದ ಮೇಲೆ ಎರಡು ಪಕ್ಷಿಗಳಿರುವುದೂ ಕಂಡಿತು. ಆದರೆ ಮರದ ಬುಡದಲ್ಲಿ ಕಾಂಡವನ್ನು ಸುತ್ತಿಕೊಂಡು ಎರಡು ತಲೆಗಳ ಒಂದು ಸರ್ಪವಿದ್ದಿತು.

ರಾಜನನ್ನು ನೋಡಿದ ಕೂಡಲೇ ಅದು ಎರಡು ಹೆಡೆಗಳನ್ನೂ ಬಿಚ್ಚಿ ಕೋರೆಗಳನ್ನು ತೋರಿಸಿ ಎದ್ದಿತು. ರಾಜನು ಮಿಂಚಿನ ವೇಗದಲ್ಲಿ ಕತ್ತಿಯನ್ನು ಬೀಸಿ ಅದರ ಎರಡು ತಲೆಗಳನ್ನೂ ಕಡಿದುಬಿಟ್ಟನು. ಅದರ ಕಥೆ ಮುಗಿಯಿತು. ಮರವು ನಿರಪಾಯವಾಯಿತು.

ಅನಂತರ ರಾಜನು ಮರದ ಮೇಲಿದ್ದ ಎರಡು ಪಕ್ಷಿಗಳನ್ನೂ ಉಡುವನ್ನೂ ತೆಗೆದುಕೊಂಡು, ಹಗ್ಗದ ಮೂಲಕ ಸುರಕ್ಷಿತವಾಗಿ ಕೆಳಗಿಳಿದು ನೆಲ ಮುಟ್ಟುವುದಕ್ಕೂ ಬೆಳಗಾಗುವುದಕ್ಕೂ ಸರಿಹೋಯಿತು. ಆ ಕೂಡಲೇ ಉಡುವಿಗೆ ರೆಕ್ಕೆಗಳು ಬಂದು ಆಕಾಶದಲ್ಲಿ ಹಾರಿ ಮಾಯವಾಗಿ ಹೋಯಿತು. ರಾಜನು ಪಕ್ಷಿಗಳೊಂದಿಗೆ ಮನೆ ತಲಪಿ ತನ್ನ ಕುಮಾರಿಯರಬಳಿಗೆ ಹೋದನು. ಅವರಿಬ್ಬರಿಗೂ ಜ್ವರವು ಪೂರ್ಣ ಇಳಿದು ಹೋಗಿತ್ತು. ಮರುದಿನ ಎರಡು ಪಕ್ಷಿಗಳೂ ಎರಡು ಮೊಟ್ಟೆಗಳನ್ನುಬಿಟ್ಟು ಮಾಯವಾಗಿದ್ದುವು.

ರಾಜನು ಆ ಮೊಟ್ಟೆಗಳನ್ನು ಬೆಳ್ಳಿಯ ಬುಟ್ಟಿಯಲ್ಲಿಟ್ಟು ಕಬ್ಬಿಣದ ಪೆಟ್ಟಿಗೆಯಲ್ಲಿ ಭದ್ರವಾಗಿ ಜೋಪಾನ ಮಾಡಿಸಿದನು. ಆಮೇಲೆ ಯಾವ ವಿಶೇಷಗಳೂ ನಡೆಯದೆ ಐದು ವರ್ಷಗಳು ಕಳೆದ ಮಾರನೇ ದಿನವೇ ಕಬ್ಬಿಣದ ಪೆಟ್ಟಿಗೆಯನ್ನು ತೆರೆದು ನೋಡಿದನು. ಬೆಳ್ಳಿಯ ಬುಟ್ಟಿಯಿಂದ ಕಾಂತಿ ಕಿರಣಗಳು ಹೊರಡುತ್ತಿದ್ದುವು. ಮೊಟ್ಟೆಗಳೆರಡೂ ವಜ್ರಗಳಾಗಿ ಜಗಜಗ ಹೊಳೆಯುತ್ತಿದ್ದುವು. ಒಂದು ಮೊಟ್ಟೆಬೆಳ್ಳಗಿದ್ದರೆ ಇನ್ನೊಂದು ಗುಲಾಬಿ ಬಣ್ಣದಲ್ಲಿತ್ತು. ಅವುಗಳನ್ನು ರಾಜನು ಹೊರಗೆ ತೆಗೆಯಿಸಿದಾಗ, ರಾಜಕುಮಾರಿಯರಿಬ್ಬರೂ ಅಲ್ಲಿಯೇ ಆಶೆಯಿಂದ ನೋಡುತ್ತ ನಿಂತಿದ್ದರು.

ರಾಜನು ಕುಮಾರಿಯರನ್ನು ನೋಡಿ, "ಈ ವಜ್ರಗಳೆರಡೂ ನಿಮಗೇ. ಆದರೆ ಯಾರಿಗೆ ಯಾವ ವಜ್ರವೆಂಬುದನ್ನು ಕುರಿತು ಈಗ ಯೋಚಿಸಬೇಡಿ. ಇವತ್ತು ಸಾಯಂಕಾಲ ನಿಮಗಿಬ್ಬರಿಗೂ ಬಿಳೀಬಣ್ಣದ ಸಂಪಿಗೆ ಹೂಗಳನ್ನು ಕೂಜಾದಲ್ಲಿಟ್ಟು ಕೊಡುತ್ತೇನೆ. ನೀವು ದಿನಾ ಆ ಹೂಗಳನ್ನು ನೋಡುತ್ತಾ ಬಂದರೆ ಯಾವ ವಜ್ರ ಯಾರಿಗೆಂಬುದು ನಿಮಗೇ ಗೊತ್ತಾ

ಗುತ್ತದೆ. ಅದುವೇ ದೈವನಿಯಮ." ಎಂದನು. ಬೇರೆ ಬೇರೆ ಬಣ್ಣದ ವಜ್ರಗಳನ್ನು ಕುಮಾರಿಯರಿಗೆ ಕೊಡುವಾಗ, ಬಣ್ಣಗಳ ಭೇದದಿಂದ ಕುಮಾರಿಯರಿಗೆ ಮನ ನೊಂದು ಕಾಯಿಲೆ ಬರುವುದೇನೋ ಎಂಬ ಭಯದಿಂದ ರಾಜನು ಐಂದ್ರಜಾಲಿಕನ ಆಲೋಚನೆ ಕೇಳಿದ್ದನು. ಅಂತೆಯೇ ರಾಜನು ತನ್ನ ಆಸ್ಥಾನದ ಐಂದ್ರಜಾಲಿಕನಾದ ಮಾಯಾಪಾಲನನ್ನು ತನ್ನ ರಹಸ್ಯ ಮಂದಿರಕ್ಕೆ ರಹಸ್ಯವಾಗಿ ಕರೆಯಿಸಿ, "ವಜ್ರಗಳು ಬಂದಿವೆ. ಇನ್ನು ನಿನ್ನ ಇಂದ್ರಜಾಲವನ್ನು ಪ್ರಯೋಗಿಸುವ ಸಮಯ ಬಂತು" ಎಂದನು.

"ಅದನ್ನು ನೀವೇ ಮಾಡಬಹುದಲ್ಲ ಮಹಾರಾಜರೆ? ಶ್ವೇತಕುಮಾರಿಗೆ ಕೊಡುವ ಬಿಳೀ ಸಂಪಿಗೆ ಹೂವಿನ ಕೂಜಾದೊಳಗೆ ಸ್ವಲ್ಪ ಕೆಂಪು ಶಾಯಿಯನ್ನು ಹಾಕಿ ಹೂವಿನ ತೊಟ್ಟುಗಳು ಅದರಲ್ಲಿ ಅದ್ದುವಂತೆ ಇಡಬೇಕಾದ್ದುತಾನೇ? ಆಮೇಲೆ ಕ್ರಮವಾಗಿ ಹೂವಿನ ದಳಗಳು ಗುಲಾಬಿ ಬಣ್ಣಕ್ಕೆ ಬದಲಾಯಿಸುತ್ತವೆ. ಇದನ್ನೆಲ್ಲ ಮೊದಲೇ ನಿಮಗೆ ಹೇಳಿದ್ದೇನಲ್ಲ?" ಎಂದ ಮಾಯಾಪಾಲ.

"ಹೇಳಿದ್ದರೂ ಅದೆಲ್ಲ ನಿನ್ನ ಕೈಯಿಂದಲೇ ನಡೆದರೆ ಚೆನ್ನಾಗಿರುತ್ತೆ." ಎಂದ ರಾಜ. ಇಬ್ಬರೂ ಅರ್ಥವತ್ತಾಗಿ ನಕ್ಕರು. ಅದರಂತೆ ಮಾಯಾಪಾಲನ ಕಡೆಯಿಂದ ಆ ದಿನ ರಾತ್ರಿ ಎರಡು ಬಿಳೀ ಸಂಪಿಗೆ ಹೂವಿನ ಗೊಂಚಲುಗಳಿರುವ ಕೂಜಾಗಳನ್ನು ಇಬ್ಬರು ಕುಮಾರಿಯರಿಗೂ ಕೊಡಲಾಯಿತು. ಕೂಜಾಗಳ ಮೇಲೆ ಇಬ್ಬರ ಹೆಸರುಗಳನ್ನೂ ಬರೆಯಲಾಗಿತ್ತು. ಅವರು ತಮ್ಮ ತಮ್ಮ ಹೆಸರಿನ ಕೂಜಾವನ್ನು ತಮ್ಮ ತಮ್ಮ ಕೋಣೆಯಲ್ಲಿಟ್ಟುಕೊಂಡು ಹೂವನ್ನು ಗಮನಿಸಿಕೊಂಡೇ ಬಂದರು. ಕೃಷ್ಣಕುಮಾರಿಗೆ ಕೊಟ್ಟ ಹೂಗಳು ಇದ್ದ ಹಾಗೆ ಬೆಳ್ಳಗಾಗಿಯೇ ಇದ್ದುವು. ಆದರೆ ಶ್ವೇತಕುಮಾರಿಯ ಹೂಗಳು ದಿನದಿಂದ ದಿನಕ್ಕೆ ಬಣ್ಣ ಬದಲಾಯಿಸಿಕೊಂಡು ಬಂದುವು.

ಈ ಸಂಗತಿ ತಿಳಿದ ಕೂಡಲೇ ರಾಜಾ ಬೋಪದೇವನು ಕುಮಾರಿಯರಬಳಿಗೆ ಹೋಗಿ, "ಅಮ್ಮಗಳಿರಾ, ಯಾವ ವಜ್ರವು ಯಾರಿಗೆ ಎಂಬುದು ಈಗ ನಿಮಗೆ ತಿಳಿಯಿತಲ್ಲವೆ?" ಎನ್ನುತ್ತ ಹರಿವಾಣದ ಮುಚ್ಚಳ ತೆಗೆದು ವಜ್ರಗಳನ್ನು ತೋರಿಸಿದನು. ಶ್ವೇತಕುಮಾರಿ ಸಂತೋಷದಿಂದ ಗುಲಾಬಿ ಬಣ್ಣದ ವಜ್ರ ತೆಗೆದುಕೊಂಡಳು. ಅಷ್ಟೇ ಸಂತೋಷದಿಂದ ಕೃಷ್ಣಕುಮಾರಿ ಬಿಳೀ ವಜ್ರ ತೆಗೆದುಕೊಂಡಳು.

ತನ್ನ ಕುಮಾರಿಯರೊಳಗೆ ಬಣ್ಣದ ಜಗಳ ಬಾರದಂತೆ ಹೀಗೊಂದು ಉಪಾಯ ಮಾಡಿಸಿದ ಮಾಯಾಪಾಲ ಐಂದ್ರಜಾಲಿಕನಿಗೆ ರಾಜನು ವಿಶೇಷ ಬಹುಮಾನಗಳನ್ನಿತ್ತು ಸತ್ಕರಿಸಿದನು.






# ಬಟ್ಟೆಯ ಬವಣೆ

ಒಂದು ಊರಿನಲ್ಲಿ ಅನಂತಯ್ಯನೆಂಬ ಗೃಹಸ್ಥನಿದ್ದ. ಅವನು ಹೊಟ್ಟೆಗೂ ನಾಲಗೆಗೂ ಬೇಕಾದ ಹಾಗೆ ಖರ್ಚು ಮಾಡುವುದರಲ್ಲಿ ಹಿಂಜರಿಯದಿದ್ದರೂ ಬಟ್ಟೆ ಬರೆಗಳಿಗೆ ಮಾತ್ರ ಖರ್ಚು ಮಾಡಲಾರ. ಅವನ ಹೆಂಡತಿ ಗೋದಾವರಿ ಅದಕ್ಕೆ ತೀರ ವಿರುದ್ಧಳಾಗಿದ್ದಳು. ಅಡಿಗೆ ಮನೆಯಲ್ಲಿ ಕುಳಿತುಕೊಂಡು ಏನನ್ನೇ ತಿಂದರೂ ಯಾರೂ ನೋಡುವುದಿಲ್ಲ. ಆದರೆ ನಾಲ್ಕು ಜನರ ಎದುರಿಗೆ ತಮ್ಮನ್ನು ತೋರಿಸಿಕೊಳ್ಳುವಾಗ ಒಳ್ಳೆಯ ಬಟ್ಟೆಬರೆಗಳನ್ನು ತೊಟ್ಟುಕೊಳ್ಳಬೇಕೆಂಬುದು ಅವಳ ಅಭಿಪ್ರಾಯ. ಗಂಡ ಅವಳಿಗೆ ಬೇಕಾದ ಸೀರೆ ಕುಪ್ಪಸ ತಂದು ಕೊಡುವುದಿಲ್ಲವೆಂದು ಅವಳು ತೌರುಮನೆಯಿಂದ ವರ್ಷಕ್ಕೆ ಆರು ಸೀರೆಗಳನ್ನು ತರಿಸಿಕೊಳ್ಳುವಳು. ಅನಂತಯ್ಯ ಮಾತ್ರ ಯಾವಾಗಲೂ ಹರಿದ ಬಟ್ಟೆಗಳಿಗೆ ಹೊಲಿಗೆ ಹಾಕಿ ಹಾಕಿ ಉಪಯೋಗಿಸಿಕೊಳ್ಳುವನು.

ಅನಂತಯ್ಯನ ಬಳಿಯಲ್ಲಿದ್ದ ಎಲ್ಲಾ ಬಟ್ಟೆಗಳಲ್ಲಿ ಅತಿ ಪುರಾತನವಾದುದೊಂದು ಕಳಗಳಿಂದ ತುಂಬಿದ ಕಟ್ಟೇ ಬೈರಾಸು. ಶಿಥಿಲವಾಗಿ ಹರಿದು ಹೋಗಿದ್ದ ಆ ಬೈರಾಸನ್ನು ಅವನು ಬಿಟ್ಟಿರಲಿಲ್ಲ. ತನ್ನ ಗಂಡ ಆ ಹರಕು ಬೈರಾಸನ್ನು ಮೈಮೇಲೆ ಹಾಕಿಕೊಂಡು ತಿರುಗಾಡುವುದನ್ನು ನೋಡುವಾಗ ಗೋದಾವರಿಗೆ ಅವಮಾನವೆನಿಸುತ್ತಿತ್ತು. ಈ ವಿಷಯದಲ್ಲಿ ಪ್ರತಿನಿತ್ಯ ಅವರೊಳಗೆ ಜಗಳವಾಗುತಿತ್ತು.

ಒಂದುದಿನ ಅನಂತಯ್ಯ ಸ್ನಾನ ಮಾಡಿ ಆ ಬೈರಾಸನ್ನು ಕುಕ್ಕಿ ಹಿಂಡಿ, ಹೊರಗೆ ಆರ ಹಾಕಿದರೆ ಗಾಳಿಗೆ ಹಾರುವುದೆಂದುಕೊಂಡು, ಮನೆಯೊಳಗೆ ಆರ ಹಾಕಲು ತಂದನು. ಆಗ ಗೋದಾವರಿ ಅಡಿಗೇ ಮನೆಯಿಂದ ಹೊರಗೆಬಂದು, "ನಿಮ್ಮ ಪುಣ್ಯ, ಇಲ್ಲಿ ನೋಡೀಂದ್ರೆ. ನನ್ನ ಅಕ್ಕ ಇಲ್ಲಿಗೆ ಬರುತ್ತಾಳಂತೆ. ಈ ಚಿಂದಿ ಬೈರಾಸನ್ನು ದೂರ ಬಿಸಾಡಿಬಿಡಿ. ನನ್ನ ಮಣಿ ಸಂಚಿಯ ಕೆಲವು ಮಣಿಗಳು ಜಾರಿಹೋಗಿವೆ. ಅದನ್ನು ಪೇಟೆಗೆ ತೆಗೆದುಕೊಂಡು ಹೋಗಿ ಸರಿಮಾಡಿಸಿ ತನ್ನಿ. ಈ ಕೊಳಕು ಬೈರಾಸು ಕಣ್ಣಿಗೆ ಬಿದ್ದರೆ ನನ್ನ ಅಕ್ಕ ನೆಗಾಡುವಳು" ಎಂದಳು.

ಅನಂತಯ್ಯ ಅಲಕ್ಷ್ಯದಿಂದ ಬೈರಾಸನ್ನು ಆರ ಹಾಕುತ್ತ, "ಹ್ಞಂ, ನಿನ್ನ ಮಣಿ ಸಂಚಿ ಸರಿಮಾಡಿಸದಿದ್ದರೆ ಕೊಂಪೆ ಮುಳುಗುತ್ತೆಯೇ ? ನನಗೆ ಬೇರೆ ಕೆಲಸವಿಲ್ಲಾ ಅಂತ ಮಾಡಿದೆಯಾ ?" ಎಂದ.

ಎಂ. ಕೆ. ಈಶ್ವರರಾವ್

ಗೋದಾವರಿ ವಿಪರೀತ ಸಿಟ್ಟಿನಿಂದ ಧಪಧಪನೆ ಬಂದು, ಆ ಬೈರಾಸನ್ನೆತ್ತಿ ದೊಡ್ಡಿ ಬಾಗಿಲಿನಿಂದ ಹೊರಗೆ ಬಿಸುಟು, "ಛಿ! ಆ ಬೈರಾಸನ್ನು ಮನೆಯೊಳಗೆ, ಆರ ಹಾಕಿದರೆ ಮನೆ ತುಂಬಾ ಹಾಳು ವಾಸನೆ!" ಎಂದಳು.

ಅನಂತಯ್ಯ ಹೊರಗೆ ಹೋಗಿ ಆ ಬೈರಾಸನ್ನು ಎತ್ತಿಕೊಂಡು ಮತ್ತೆ ನೀರಿಗೆ ಹಾಕಿ ಕುಲುಕಿ, ಹಿಂಡಿ ಹೊರಗಿನ ದಳಿಗಳಲ್ಲಿ ಆರ ಹಾಕಿದನು. ಅನಂತರ ಅವನು ಊಟ ಮುಗಿಸಿ ಲೆಕ್ಕ ಬರೆಯುವ ಕೆಲಸಕ್ಕೆ ಅಂಗಡಿಗೆ ಹೊರಟುಹೋದ ಮೇಲೆ, ಆ ಬೈರಾಸನ್ನು ದುರುಗುಟ್ಟಿ ನೋಡಿದಳು ಗೋದಾವರಿ. ತನ್ನ ಅಕ್ಕ ಬರುವುದರೊಳಗೆ ಆ ಹಾಳು ದರಿದ್ರವನ್ನು ಹೇಗೆ ತೊಲಗಿಸುವುದೆಂದು ಅವಳು ಆಲೋಚಿಸುದ್ದಳು.

ಬಿಸಿಲೇರುತ್ತಾ ಬರುವಾಗ ಒಬ್ಬ ಮುದಿಭಿಕ್ಷುಕ ಮನೆಗೆ ಸಮೀಪದಲ್ಲಿ ನಡೆಯುತ್ತಾ ಬರುವುದನ್ನು ಅವಳು ನೋಡಿದಳು. ಅವನನ್ನು ಕರೆದು, ದಳಿಯಲ್ಲಿರುವ ಬೈರಾಸನ್ನು ತೋರಿಸಿ, ಅದನ್ನು ತೆಗೆದುಕೊಂಡು ಹೋಗಲು ಹೇಳಿದಳು. ಆ ಭಿಕ್ಷುಕ ಹತ್ತಿರ ಬಂದು ಆ ಬೈರಾಸನ್ನು ನೋಡಿ ತುಟಿ ಮೂಗು ಸೊಟ್ಟಮಾಡಿ, "ಈ ಕೊಳೆತು ನಾರುವ ಬಟ್ಟೆ ನನಗೇಕೆ?" ಎಂದು ಹೊರಡಲನುವಾದನು.

"ತಾಳಪ್ಪಾ. ಒಂದು ರೂಪಾಯಿ ಕೊಡುತ್ತೇನೆ. ಅದನ್ನು ತೆಗೆದುಕೊಂಡು ಹೋಗಿಬಿಡು" ಎಂದು ಗೋದಾವರಿ ಅವನನ್ನು ನಿಲ್ಲಿಸಿ, ಒಂದು ರೂಪಾಯಿ ತಂದುಕೊಟ್ಟಳು. ಭಿಕ್ಷುಕ ಆ ಬೈರಾಸನ್ನು ತೆಗೆದುಕೊಂಡು ಹೊರಟುಹೋದ.

ಆದಿನ ಸಾಯಂಕಾಲ ಆ ಭಿಕ್ಷುಕ ಬೇರೊಂದು ಬೀದಿಯಲ್ಲಿದ್ದ. ಅದೇ ಬೀದಿಯಲ್ಲಿ ಅಂಗಡಿ ಕೆಲಸ ಮುಗಿಸಿ ಮನೆಗೆ ಮರಳುತ್ತಿದ್ದ ಅನಂತಯ್ಯ ಭಿಕ್ಷುಕನ ತೋಳಿನಲ್ಲಿ ಕಳಕಳವಾಗಿ ಕಾಣುವ ತನ್ನ ಕಟ್ಟೇ ಬೈರಾಸೇ ಇರುವುದನ್ನು ನೋಡಿದ. ಅನಂತಯ್ಯ



ಕೋಪದಿಂದ ಆ ಭಿಕ್ಷುಕನನ್ನು ಅಡ್ಡಗಟ್ಟಿ, "ಮುದಿ ಹೆಣವಾದರೂ ಕಳ್ಳ ಬುದ್ಧಿ ಬಿಡಲಿಲ್ಲ. ದಳಿಯಲ್ಲಿ ಆರಿಸಿದ ನನ್ನ ಬೈರಾಸನ್ನು ಕದ್ದುಕೊಂಡು ಬಂದೆಯಾ?" ಎಂದ.

"ಯಾರಯ್ಯಾ ನೀನು? ಬಡಭಿಕ್ಷುಕನನ್ನು ದೋಚಿಕೊಳ್ಳುವ ದೊರೇ! ನಾಚಿಕೆಯಿಲ್ಲಾ ನಿನಗೆ? ಯಾವಳೋ ಮಹಾಲಕ್ಷ್ಮಿ, ತಕೋಪ್ಪಾ ಅಂತ ಕೊಟ್ಟದ್ದನ್ನು ಕದ್ದುಕೊಂಡದ್ದು ಅನ್ನುವಿಯಾ?" ಎಂದು ಬೈಯುತ್ತಾ ಭಿಕ್ಷುಕನು ತನ್ನ ಪಾಡಿಗೆ ಹೊರಟು ಹೋದ.

ಅನಂತಯ್ಯ ಕೋಪದಿಂದ ನೆಲ ಅಪ್ಪಳಿಸುತ್ತಾ ಮನೆಯಕಡೆಗೆ ನಡೆದ. ದೇವಸ್ಥಾನಕ್ಕೆ ಹೋಗುತ್ತಿದ್ದ ಗೋದಾವರಿ ದಾರಿಯಲ್ಲೇ ಅವನಿಗೆ ಇದಿರಾದಳು.

"ಏನೇ, ಅಷ್ಟುಹಟವೆ? ನನ್ನ ಬೈರಾಸನ್ನು ಭಿಕ್ಷುಕನಿಗೆ ಕೊಟ್ಟೆಯಾ?" ಎಂದು ಸಿಟ್ಟಿನಿಂದ ಕೇಳಿದ.

"ಕೊಟ್ಟೆ. ಆ ದರಿದ್ರ ತೊಲಗಿಹೋದುದಕ್ಕೆ

ದೇವಸ್ಥಾನದಲ್ಲಿ ಹಣ್ಣು ಕಾಯಿ ಮಾಡಿಸಲು ಹೋಗುತ್ತೇನೆ" ಎಂದು ಹೇಳಿ ಬಿರಬಿರನೆ ಹೊರಟೇ ಹೋದಳು ಗೋದಾವರಿ.

ಅನಂತಯ್ಯ ಕೋಪದಿಂದ ಹಲ್ಲು ಕಡಿಯುತ್ತ ಅವಳನ್ನು ನೋಡಿದ. ಹೇಗಾದರೂ ಆ ಬೈರಾಸನ್ನು ತಿರುಗಿ ಪಡೆಯಲೇಬೇಕೆಂದು ನಿಶ್ಚಯಿಸಿಕೊಂಡು ಅವನು ಮನೆಗೆ ಹೋಗಿ, ಗೋಡೆಯಲ್ಲಿ ನೇತಾಡುತ್ತಿದ್ದ ಹೆಂಡತಿಯ ಮಣಿಸಂಚಿಯನ್ನು ತೆಗೆದುಕೊಂಡು ನೆರೆಮನೆಯ ಬಾಮಕ್ಕನ ಹತ್ತಿರ, "ಗೋದಾವರಿ ಬಂದರೆ, ಮಣಿ ಸಂಚಿ ಸರಿಮಾಡಿಸಲು ಪೇಟೆಗೆ ಹೋದೆನೆಂದು ಹೇಳಿ" ಎಂದು ತಿಳಿಸಿ ನಡೆದನು.

ಅವನು ಆ ಮುದಿ ಭಿಕ್ಷುಕನನ್ನು ಹುಡುಕುತ್ತಾ ನಾಲ್ಕು ಮಂದಿಯನ್ನು ವಿಚಾರಿಸಿದಾಗ, ಕಟ್ಟೀ ಬೈರಾಸಿನೊಂದಿಗಿದ್ದ ಆ ಭಿಕ್ಷುಕ ಊರ ಕೊನೆಯಲ್ಲಿರುವ ಆಲದ ಮರದ ಬುಡದಲ್ಲಿರುವ ಸಂಗತಿ ತಿಳಿಯಿತು. ಅವನು ಅಲ್ಲಿಗೆ ಹೋಗಿ ನೋಡಲು, ಆ ಭಿಕ್ಷುಕ ಬಂದಿರಲಿಲ್ಲ. ಅವನ ಕುರುಡಿ ಹೆಂಡತಿ ಮರದಬೊಡ್ಡೆಗೆ ಒರಗಿ ಕುಳಿತಿದ್ದಳು. ಅವಳ ಬದಿಯಲ್ಲಿ ಹಳೇ ಬಟ್ಟೆಗಳನ್ನು ಅಲ್ಲಲ್ಲಿ ತೇಪೆ ಇಟ್ಟು ಹೊಲಿದ ಒಂದು ಕೊಳಕು ಚೀಲವೂ ಅದರ ತುಂಬಾ ಚಿಂದಿಬಟ್ಟೆಗಳೂ ಇದ್ದುವು. ಅವಳ ಕೈಯಲ್ಲಿ ಒಂದು ಹುಣಿಸೇ ಕೋಲು ಇತ್ತು. ಅನಂತಯ್ಯ ಅವಳ ಸಮೀಪಕ್ಕೆ ಹೋಗಿ ಆ ಚೀಲದಲ್ಲಿ ತನ್ನ ಬೈರಾಸು ಇರಬಹುದೇ ಎಂದು ಹಣಿಕಿದ. ಅವಳು ಅವನ ಕಾಲಿನ ಮೇಲೆ ಹುಣಿಸೇ ಕೋಲಿನಿಂದ ಹೊಡೆದು, "ಯಾರೋ ಅದು ಕಳ್ಳಾ! ಕುರುಡೀ ಅಂತ ಇದ್ದದ್ದು ದೋಚಿಕೊಳ್ಳೀಯಾ? ಹೋಗೋ" ಎಂದು ಕೂಗಿದಳು. ಅನಂತಯ್ಯ ಚುರ್ರೆಂಬ ನೋವನ್ನು ಸಹಿಸಿಕೊಂಡು, "ನಿನ್ನ ಗಂಡನಾ ಆ ಮುದುಕ? ಅವನ ಹತ್ತಿರ ಮಾತಾಡಲಿಕ್ಕೆ ಬಂದೆ." ಎಂದ.

"ಕತ್ತಲೆಯಾದ ಮೇಲೆ ಬಾ. ಆಗ ಇರುತ್ತಾನೆ" ಎಂದಳು ಕುರುಡಿ. ಅನಂತಯ್ಯ ಅಲ್ಲಿಂದ ಹೊರಟು ಹೋಗುವ ಹಾಗೆ ಆಚೆಗೆ ಹೋಗಿ, ಹಿಂದಿನ ಬದಿಯಿಂದ ಬಂದು ಸದ್ದುಮಾಡದೆ ಮರದ ಮೇಲೆ ಹತ್ತಿ



ಅಡಗಿ ಕುಳಿತ. ಕತ್ತಲು ಬೀಳುತ್ತಿದ್ದಂತೆ ಮುದಿಭಿಕ್ಷುಕ ಅಲ್ಲಿಗೆ ಬಂದ. "ಇವತ್ತು ಇದೊಂದು ದರಿದ್ರ ಚಿಂದಿ ಬಟ್ಟೆ, ಒಂದು ರೂಪಾಯಿಯೊಂದಿಗೆ ಸಿಕ್ಕಿತೂಂತ ಏನೂ ಸಂತೋಷಪಡುವಂತಿಲ್ಲ. ದಿನಾ ಸಿಗುವ ಅರ್ಧದಷ್ಟು ಕೂಡಾ ಈದಿನ ಸಿಕ್ಕಿಲ್ಲ. ಹಾಳಾದ ಬಟ್ಟೆ" ಎನ್ನುತ್ತ ಆ ಬೈರಾಸನ್ನು ಚಿಂದಿಯ ಚೀಲದೊಳಗೆ ತುರುಕಿಟ್ಟ. ಅವನ ಮಾತು ಕೇಳಿ ಅನಂತಯ್ಯನ ಮನಸ್ಸಿಗೆ ಚಿವುಟಿದ ಹಾಗಾಯಿತು.

ಆಮೇಲೆ ಮುದಿಭಿಕ್ಷುಕ ಕಲ್ಲೊಲೆ ಹಚ್ಚಿ ಅಡಿಗೆ ಮಾಡಿದ. ಅವನೂ ಅವನ ಹೆಂಡತಿಯೂ ಏನನ್ನೋ ಬೇಯಿಸಿ ತಿಂದು, ವಿಚಿತ್ರರಾಗದಲ್ಲಿ ಹಾಡುತ್ತ ಮಲಗಿದರು. ಅವರಿಗೆ ಒಳ್ಳೆಯ ನಿದ್ದೆ ಬಂದಿತೆಂದು ನಂಬುಗೆಯಾದ ಮೇಲೆ ಅನಂತಯ್ಯ ಮರದಿಂದ ಕೆಳಗಿಳಿಯಲು ಹವಣಿಸಿದ. ಆ ಹೊತ್ತಿಗೆ ಇಬ್ಬರು ಕಳ್ಳರು ಆ ಮರದ ಸಮೀಪಕ್ಕೆ ಬಂದು ರಹಸ್ಯವಾಗಿ ಮಾತಾಡಿಕೊಳ್ಳ ತೊಡಗಿದರು: "ಎಲ್ಲಿ ಅಡಗಿಸಿಡೋಣ?" ಎಂದ ಒಬ್ಬ. "ಈ ಚೀಲದೊಳಗೇ ಅಡಗಿಸಿಡುವ. ಚಳಿಗಾಲಬರುವವರೆಗೂ ಇದರ ಬಟ್ಟೆ ತೆಗೆಯಲಾರರು" ಎಂದ ಎರಡನೇ ಕಳ್ಳ.

ತರುವಾಯ ಕಳ್ಳರಿಬ್ಬರೂ ಮರದ ಕೆಳಗಿನ ಕತ್ತಲೆಗೆ ಬಂದು, ಭಿಕ್ಷುಕನ ಚಿಂದಿಯ ಚೀಲವನ್ನೆತ್ತಿ ಅದರೊಳಗೆ ಏನನ್ನೋ ಅಡಗಿಸಿಟ್ಟು ಹೊರಟು ಹೋದರು. ಅವರು ಹೊರಟು ಹೋಗುವಾಗ ಕುರುಡಿಗೆ ಎಚ್ಚರವಾಗಿ "ಯಾರ್ರೋ ಅವರು?" ಎಂದು ಕೇಳಿ, ಚೀಲವನ್ನು ತಡವಿ ಎಳೆದು ತಲೆಯ ಬುಡದಲ್ಲಿಟ್ಟುಕೊಂಡು ಮತ್ತೆ ನಿದ್ದೆಹೋದಳು.

ಕಳ್ಳರು ಹೆದರಿದಂತೆ ಅವರನ್ನು ಹಿಡಿಯುವವರಾರೂ ಆ ಕಡೆಗೆ ಬಂದಿರಲಿಲ್ಲ. ಭಿಕ್ಷುಕನ ಚೀಲದೊಳಗೆ ತನ್ನ ಬೈರಾಸಿನ ಜತೆಗೆ ಕಳ್ಳರು ಅಡಗಿಸಿಟ್ಟ ಸೊತ್ತು ಕೂಡಾ ಇರುವುದರಿಂದ ಅನಂತಯ್ಯನಿಗೆ, ಹೇಗಾದರೂ ಆ ಚೀಲವನ್ನೇ ವಶಪಡಿಸಿಕೊಳ್ಳ ಬೇಕೆನಿಸಿತು. ಬೆಳಗಾದ ಕೂಡಲೇ ಅವನು ಮರದಿಂದಿಳಿದು ಭಿಕ್ಷುಕನ ಬಳಿಗೆ ಬಂದು, "ನಿನ್ನ ಹತ್ತಿರ ಹಳೇ ಬಟ್ಟೆಯ ಮೂಟೆ ಇದ್ದ ಹಾಗಿದೆಯಲ್ಲಾ?



ಕೊಡುವಿಯಾ ? ಒಂದು ಕೆಲಸಕ್ಕಾಗಿ ಬೇಕಾಗಿದೆ" ಎಂದು ಕೇಳಿದ. "ಕೊಡಲಾರೆ, ಹೋಗಯ್ಯ" ಎಂದ ಭಿಕ್ಷುಕ. ಅನಂತಯ್ಯ ಬಿಡದೆ, "ಸುಮ್ಮನೆ ಕೇಳುವು ದಿಲ್ಲ. ಇಕೋ ನೋಡು. ಅದರ ಬದಲಿಗೆ ಈ ಮಣಿಗಳ ಸಂಚಿ ಕೊಡುತ್ತೇನೆ" ಎಂದ.

ಕುರುಡಿ ಭಿಕ್ಷುಕಿ ಮಣಿಗಳ ಸಂಚಿಯನ್ನು ತಡವಿ ನೋಡಿ, ಸಂತೋಷಪಟ್ಟು, "ಸರಿ. ನಮ್ಮ ಚಿಂದೀ ಚೀಲ ಇದಕ್ಕೆ ಬದಲಾಗಿ ಕೊಟ್ಟುಬಿಡು. ಅವರಿಗೆ ಅಷ್ಟೊಂದು ಆಗತ್ಯವಿಲ್ಲದಿದ್ದರೆ ಕೇಳುತ್ತಾರೆಯೇ ?" ಎಂದಳು ಗಂಡನ ಹತ್ತಿರ.

ಅನಂತಯ್ಯ ಮಣಿ ಸಂಚಿಯನ್ನು ಕೊಟ್ಟು ಭಿಕ್ಷುಕರ ಚೀಲ ತೆಗೆದುಕೊಂಡು ಸಂತೋಷದಿಂದ ಮನೆಗೆ ಬಂದು ಮುಟ್ಟಿದ. ಅವನನ್ನು ನೋಡಿದ ಕೂಡಲೇ ಗೋದಾವರಿ "ರಾತ್ರಿ ಪೂರಾ ಎಲ್ಲಿಗೆ ಹೋದಿರಿ ? ಎಲ್ಲಿದೆ ನನ್ನ ಮಣಿ ಸಂಚಿ ? ಇದೇನು ತೇಪೆ ಚೀಲ ?" ಎಂದು ಕೇಳಿದಳು.

"ನಿನ್ನ ಹಳೆಯ ಮಣಿ ಸಂಚಿ ಕೊಟ್ಟು ಇದನ್ನು ತಂದಿದ್ದೇನೆ. ಇದರೊಳಗೆ ನಿನಗೆ ಸಂತೋಷವಾಗು ವಂಥಾದ್ದು..." ಎನ್ನುತ್ತಾ ಅನಂತಯ್ಯ ಭಿಕ್ಷುಕರ ಚೀಲವನ್ನು ಮುಂದೆ ಮಾಡಿದನೋ ಇಲ್ಲವೋ, ಗೋದಾವರಿ ಅದನ್ನು ಕಸಕ್ಕನೆ ಎಳೆದುಕೊಂಡು, "ನಿಮ್ಮ ಮುಖಕ್ಕೆ ಬೆಂಕೀ ಹಚ್ಚ ! ಬಂಗಾರದ ಚಂದ್ರಹಾರ ಕಡಿದು ಹೋಗಿತ್ತು, ಅಂತ ಅದನ್ನು ತೆಗೆದು ಆ ಮಣಿ ಸಂಚಿಯೊಳಗೆ ಇಟ್ಟಿದ್ದೆ. ಅದನ್ನು ಕೂಡಾ ಸರಿಮಾಡಿಸಿ ತರಲು ಹೇಳುವಾ ಅಂತ ಇದ್ದೆ. ಅದನ್ನೆಲ್ಲಾ ಕೊಟ್ಟು ಇನ್ನಿಷ್ಟು ಕೊಳಕು ಚಿಂದೀ ಚೀಲ ತರಬೇಕಾದರೆ ಏನು ಹುಚ್ಚು ಹಿಡಿಯಿತಪ್ಪ ನಿಮಗೇ! ಛೀ ಛೀ" ಎನ್ನುತ್ತ, ಚೀಲವನ್ನು ಬೀದಿಯ ನಡುವೆ ಬೀಳುವಂತೆ ಬಿಸುಟಳು.

ಆ ರಭಸಕ್ಕೆ ಅದರೊಳಗಿದ್ದ ಚಿಂದಿ ಚೂರು ಬಟ್ಟೆ ಗಳೆಲ್ಲ ಹೊರಬಿದ್ದುವು. ಅವುಗಳೊಂದಿಗೆ ಕಳ್ಳರು ಅಡಗಿಸಿಟ್ಟ ಕತ್ತಿ ಕೂಡಾ ಹೊರಗೆ ಬಿತ್ತು. ಆ ಕತ್ತಿ ಯಲ್ಲಿ ರಕ್ತದ ಕಲೆಗಳಿದ್ದುವು. ಕಳ್ಳರು ಆ ರಾತ್ರಿ ಯಾರನ್ನೋ ಕೊಲೆಮಾಡಿ ಆ ಕತ್ತಿಯನ್ನು ಆ ಚೀಲ ದೊಳಗೆ ಅಡಗಿಸಿಟ್ಟಿದ್ದರು.

ಬೀದಿಯಲ್ಲಿ ಜನರು ಗುಂಪು ಗೂಡಿದರು. ಬೇಗ ದಲ್ಲೇ ರಕ್ಷಕಭಟರು ಬಂದು ಆ ಕತ್ತಿಯನ್ನು ವಶಪಡಿಸಿ ಕೊಂಡು ಅನಂತಯ್ಯನನ್ನೂ ಕರೆದುಕೊಂಡುಹೋಗಿ ಖೈದಿನಲ್ಲಿಟ್ಟರು.

ಆಮೇಲೆ ಅನಂತಯ್ಯನ ಕಷ್ಟ ದೇವರಿಗೇ ಪ್ರೀತಿ. ತಾನು ನಿರಪರಾಧಿ ಎಂದು ರುಜುವು ಮಾಡಲಿಕ್ಕೆ ಅವನು ಬಹಳ ಹಣ ಖರ್ಚು ಮಾಡಬೇಕಾಯಿತು. ಈಗ ಅನಂತಯ್ಯ ಹೆಂಡತಿ ಹೇಳಿದ ಹಾಗೆ ಕೇಳಿ ಕೊಂಡಿದ್ದಾನೆ.





# ಪುಣ್ಯಪಾಪಗಳು

ಅನೇಕ ವರ್ಷಗಳ ಹಿಂದೆ ತಾಮ್ರಲಿಪ್ತಿ ನಗರದಲ್ಲಿ ಧನಗುಪ್ತನೆಂಬ ರತ್ನ ಮೊದಲಾದ ವಜ್ರಗಳ ವ್ಯಾಪಾರ ಮಾಡುವ ವರ್ತಕನೊಬ್ಬನಿದ್ದ. ಅವನು ನಕಲೀ ವಜ್ರಗಳನ್ನು ಉತ್ತಮ ವಜ್ರಗಳೆಂದು ಹೇಳುತ್ತ ಅಕ್ರಮ ವ್ಯಾಪಾರ ಮಾಡುವುದರಲ್ಲಿ ಬಹಳ ಗಟ್ಟಿಗ. ಅಸಲು ವಜ್ರಗಳಿಗೆ ಸಮಾನವಾಗಿ ಕಾಣುವಂತಹ ನಕಲೀ ವಜ್ರಗಳನ್ನು ಅವನು ವಿದೇಶಗಳಲ್ಲೇ ಕೊಂಡು ಕೊಳ್ಳುತ್ತಿದ್ದ. ಅವನು ಇಂತಹ ಮೋಸಗಳನ್ನು ಬಹಳ ಯುಕ್ತಿಯಿಂದ ಮಾಡುತ್ತಿದ್ದ. ಸಾಮಾನ್ಯದಲ್ಲಿ ಸಿಕ್ಕಿ ಬೀಳುವವನಲ್ಲ. ಸಿಕ್ಕಿ ಬೀಳುವೆನೆಂಬ ಭಯವೂ ಅವನಿಗಿಲ್ಲ.

ಈ ವರ್ತಕನು ತನ್ನ ಕಡೆಯ ಕಟ್ಟಾಳುಗಳನ್ನೇ ಹಡಗುಗಳನ್ನು ಕೊಳ್ಳೆ ಹೊಡೆಯಲು ನಿಯಮಿಸಿ, ಅವರು ಕೊಳ್ಳೆ ಹೊಡೆದ ಮೇಲೆ, ತನ್ನ ಸರಕುಗಳೂ ಹೋದುವಲ್ಲಾ ಎಂದು ಎಲ್ಲ ವರ್ತಕರ ಜತೆಯಲ್ಲಿ ತಾನು ಕೂಡಾ ಬಾಯಿ ತುಂಬಾ ಗೋಳಾಡುತ್ತಿದ್ದ. ಮಾತುಮಾತಿಗೂ ದೇವರ ಹೆಸರು ಹೇಳುವ ಅವನು ನ್ಯಾಯ ಮಾರ್ಗದಲ್ಲಿ ನಡೆಯುವ ವರ್ತಕನೆಂದೇ ಎಲ್ಲರೂ ತಿಳಿದುಕೊಂಡಿದ್ದರು.

ಒಂದುಸಾರಿ ವರ್ತಕ ಧನಗುಪ್ತನು ಹಡಗಿನಿಂದಿಳಿದು ವಜ್ರಗಳೊಂದಿಗೆ ತನ್ನ ಮನೆಗೆ ಹೋಗುತ್ತಿದ್ದ. ದಾರಿಯಲ್ಲಿ ಒಬ್ಬ ಸನ್ಯಾಸಿ ಅವನಿಗೆ ಇದಿರಾಗಿ ಬಂದು ಅವನನ್ನು ಮೇಲಿನಿಂದ ಕೆಳಗಿನವರೆಗೂ ಚೆನ್ನಾಗಿ ನೋಡಿ, "ಅಯ್ಯಾ, ಗಾಜಿನ ಪಾತ್ರದಲ್ಲಿರುವ ಬಣ್ಣದ ನೀರಿನ ಹಾಗೆ, ನಿಮ್ಮೊಳಗಿರುವ ಪಾಪಗಳೆಲ್ಲ ಹೊರಗೆ ಕಾಣುತ್ತಿವೆ. ಅಯ್ಯೋ ಪಾಪ! ಅದಿನ್ನು ಅಗ್ನಿ ಪರ್ವತದ ಹಾಗೆ ನಿಮ್ಮನ್ನು ಸೀಳಿ ಹೊರಗೆ ಬಂದರೆ ನಿಮ್ಮ ಗತಿ ಹೇಗೋ! ನೀವು ತುಂಬ ಜಾಗ್ರತೆಯಾಗಿರಬೇಕು." ಎಂದ.

ವ್ಯಾಪಾರಿಗೆ ಈ ಮಾತು ಕೇಳಿದ ಕೂಡಲೇ ದಿಗಿಲು ಹುಟ್ಟಿತು. ಈ ವಿಧವಾಗಿ ಅವನ ಅಸಲು ಬಣ್ಣ ಕಂಡು ಹಿಡಿದವನು ಅದುವರೆಗೂ ಯಾರೂ ಇರಲಿಲ್ಲ. ಈ ಸನ್ಯಾಸಿ ಯಾರೋ ಸಿದ್ಧ ಪುರುಷನ ಹಾಗಿದ್ದಾನೆ. ಇವನಿಗೆ ಶರಣಾಗುವುದೇ ಮೇಲು. ಹೀಗೆಂದುಕೊಂಡು ಧನಗುಪ್ತನು, "ಸ್ವಾಮಿ, ನಾನು ಏನು ಮಾಡಬೇಕೆಂಬುದನ್ನು ನೀವೇ ಅಪ್ಪಣೆ ಕೊಡಿಸಬೇಕು" ಎಂದು ಕೈಮುಗಿದು ಕೇಳಿದನು. "ಅದು ನೀನು ಮಾಡಿದ ಪಾಪಗಳಿಗೆ ತಕ್ಕ ಹಾಗೆ

ಬಿ. ನಾಗೇಶ್ವರರಾವ್



ಇರುತ್ತದಪ್ಪಾ. ಒಟ್ಟಿನಮೇಲೆ ತುಂಬಾ ಪಾಪಕಾರ್ಯಗಳನ್ನು ಮಾಡಿದವರು ಭೂದಾನ ಗೋದಾನಗಳನ್ನು ಸಾಧ್ಯವಾದಷ್ಟೂ ಮಾಡಿದರೆ ಎಲ್ಲ ಪಾಪಗಳಿಗೂ ಒಳ್ಳೆಯದು. ಯಥೇಷ್ಟ ಅನ್ನದಾನ ಕೂಡಾ ಮಾಡು. ಸಾಧು ಸನ್ಯಾಸಿಗಳಿಗೆ ಸಂತರ್ಪಣೆ ನೀಡು. ನಿನ್ನ ಪಾಪಗಳು ಶಾಂತಿ ತಳೆಯುತ್ತವೆ." ಎಂದ ಸನ್ಯಾಸಿ.

"ಅದನ್ನೆಲ್ಲಾ ಎಷ್ಟಾದರೂ ಮಾಡಬಹುದು. ಆದರೆ ನನಗೆ ಒಂದು ಕ್ಷಣ ಕೂಡ ತೀರಿಕೆ ಇಲ್ಲ. ಯಾವಾಗಲೂ ದೇಶಾಂತರಗಳಲ್ಲೇ ಸಂಚರಿಸಿಕೊಂಡಿರಬೇಕಾಗುತ್ತೆ. ತಿಂಗಳಿಗೆ ಒಂದೆರಡು ದಿನ ಮನೆಗೆ ಬಂದಿದ್ದರೆ ಹೆಚ್ಚು. ಹೀಗಿರುವ ನನಗೆ ಪುಣ್ಯಕಾರ್ಯಗಳನ್ನು ಆಚರಿಸಲು ತಕ್ಕುದಾದ ವೇಳೆಯೆಲ್ಲಿದೆ? ಅದೇ ಯೋಚನೆಯಾಗಿದೆ. ಏನು ಮಾಡಲಿ?" ಎಂದು ವ್ಯಾಪಾರಿ ಕೇಳಿದ.

"ಆ ಚಿಂತೆ ಬಿಟ್ಟುಬಿಡಯ್ಯ. ಪುಣ್ಯಕಾರ್ಯಗಳನ್ನು ನಿನ್ನ ಹೆಸರಿನ ಮೇಲೆ ನಿನ್ನ ಹೆಂಡತಿ ಮಾಡಿದರೂ ನಡೆಯುತ್ತದೆ. ನೀನೇ ಇರಬೇಕಾಗಿಲ್ಲ." ಎಂದು ಹೇಳಿ ಸನ್ಯಾಸಿ ಎತ್ತಲೋ ಹೊರಟುಹೋದ.

ಧನಗುಪ್ತನು ಮನೆಗೆ ಬಂದು ತನ್ನ ಹೆಂಡತಿಯೊಂದಿಗೆ, "ನಾಳೆಯಿಂದ ನೀನು ನನ್ನ ಹೆಸರಿನ ಮೇಲೆ ದಾನಧರ್ಮಗಳನ್ನು ಮಾಡಬೇಕು. ನನ್ನ ಹತ್ತಿರ ಏನೂ ಕೇಳಬೇಡ. ನಿನಗೆ ತೋರಿದಂತೆ ಸ್ವಲ್ಪಕಾಲದವರೆಗೆ ಗೋದಾನ, ಅನ್ನದಾನ, ವಸ್ತ್ರದಾನ, ಪೂಜೆಗಳು, ವ್ರತಗಳು ಹೀಗೆ ನಿನಗೆ ಏನೇನು ತೋರುವುದೋ ಅದನ್ನೆಲ್ಲಾ ಮಾಡು. ನನಗೆ ವೇಳೆ ತೀರಿಕೆ ಯಾವುದೂ ಇಲ್ಲ. ಎಷ್ಟು ಖರ್ಚಾದರೂ ಆಗಲಿ. ಪುಣ್ಯ ಮುಖ್ಯ" ಎಂದ.

ಗಂಡನ ಮುಖದಿಂದ ಹೊರಟ ಅಮೃತದಂತಹ ಮಾತನ್ನು ಕೇಳಿ ಅವನ ಹೆಂಡತಿಗೆ ಆದ ಆಶ್ಚರ್ಯ, ಸಂತೋಷ ಅಷ್ಟೂ ಇಷ್ಟೂ ಅಲ್ಲ. ಪುಣ್ಯಕಾರ್ಯಗಳನ್ನು ಮಾಡುವುದೆಂದರೆ ಅವಳಿಗೆ ಬಹಳ ಇಷ್ಟ. ಆದರೆ ಗಂಡನಿಗೆ ಅವೆಲ್ಲ ಹಿಡಿಸುತ್ತಿರಲಿಲ್ಲ. ಈಗ ಅವನ ಬಾಯಿಯಿಂದಲೇ ಅಂತಹ ಮಾತು ಬಂದುದನ್ನು ಕೇಳಿ, ಮೊದಲು ನಂಬುವುದೇ ಕಷ್ಟವಾಯಿತು. ಆಮೇಲೆ, "ಏನಾಯಿತು? ಏನು ಸಮಾಚಾರ ಇವತ್ತು?" ಎಂದು ಕೇಳಿದಳು.

"ನಾವು ಬಹಳ ಪಾಪಗಳನ್ನು ಮಾಡುತ್ತಿದ್ದೇವಂತೆ. ನಮ್ಮ ಶರೀರವು ಪಾಪಗಳ ಹುತ್ತವಂತೆ. ನಾವು ತಿಳಿದು ಯಾವ ಪಾಪಗಳನ್ನೂ ಮಾಡುವುದಿಲ್ಲ ನಿಜ. ತಿಳಿಯದೆ ಮಾಡಿದರೂ ಪಾಪಗಳು ಪಾಪಗಳೇ. ಅವುಗಳಿಗೆಲ್ಲ ಶಾಂತಿಯಾಗುವಂತೆ ಸ್ವಲ್ಪಕಾಲ ದಾನಧರ್ಮ ಮಾಡಿಬಿಡೋಣ. ಹಣಕ್ಕೇನು ಬಿಡು, ದೇವರು ಕೊಡುತ್ತಾನೆ. ಈ ಶರೀರದಲ್ಲಿ ಬಲವಿದ್ದರೆ ಎಷ್ಟು ಹಣವನ್ನಾದರೂ ಸಂಪಾದಿಸಬಹುದು. ಎಲ್ಲಾ ಮಾಡಿಬಿಡು ನಿನಗೆ ತೋರಿದಂತೆ." ಎಂದ ಧನಗುಪ್ತ ವರ್ತಕ. ತನಗೆ ಈ ಯೋಚನೆ ಹೇಳಿದ ಸನ್ಯಾಸಿಯನ್ನು ಕುರಿತೂ ಹೆಂಡತಿಗೆ ಹೇಳಿದ.

ಹೆಂಡತಿ ತುಂಬಾ ಸಂತೋಷಪಟ್ಟು, ತನಗೆ ಇಂತಹ ಅವಕಾಶವನ್ನು ದೊರಕಿಸಿದ ಸನ್ಯಾಸಿಗೆ ಮನಸಾರೆ ನಮಸ್ಕಾರ ಮಾಡಿದಳು. ಅವಳ ಆನಂದ ವನ್ನು ಗಮನಿಸಿದ ಧನಗುಪ್ತನು, "ನೀನು ಮನೆ ಯನ್ನು ಮಾತ್ರ ಧರ್ಮಛತ್ರ ಮಾಡಿಬಿಡಬೇಡ. ಕೈನೀಡಲು ಬರುವವರಲ್ಲಿ ಕಳ್ಳಸುಳ್ಳರೂ ಇರುತ್ತಾರೆ. ನಿನ್ನ ದಾನಧರ್ಮಗಳನ್ನು ಧರ್ಮಛತ್ರದಲ್ಲಿಯೇ ಮಾಡು. ನಾವು ಎಷ್ಟು ಧನವಂತರೆಂಬುದು ಎಲ್ಲರಿಗೂ ಯಾಕೆ ತಿಳಿಯಬೇಕು? ಛತ್ರದಲ್ಲಾದರೆ ಕಾವಲುಗಾರರು ಇರುತ್ತಾರೆ. ಕಳ್ಳರ ಭಯ ಮನೆಗೆ ಬರುವಂತಿಲ್ಲ. ದಾನಧರ್ಮಗಳೆಲ್ಲ ನಿನ್ನ ಕೈಯಿಂದಲೇ ನಡೆಯಲಿ." ಎಂದು ಎಚ್ಚರಿಸಿದ.

ಮಾರನೆಯದಿನದಿಂದ ಧರ್ಮಛತ್ರದಲ್ಲಿ ಪುಣ್ಯ ಕಾರ್ಯಗಳು ಪ್ರಾರಂಭವಾದುವು. ಧನಗುಪ್ತ ವರ್ತಕನು ವಜ್ರಗಳ ಸಂಗ್ರಹಕ್ಕಾಗಿ ವಿದೇಶಗಳಿಗೆ ಹೋಗಿಬಿಟ್ಟನು. ಅವನ ಹೆಂಡತಿಯ ಕೈಯಮೂಲಕ ವಾಗಿ ಗೋದಾನ, ಭೂದಾನ, ವಸ್ತ್ರದಾನ, ಅನ್ನದಾನ, ಪೂಜೆ, ವ್ರತ ಮೊದಲಾದ ಘನಕಾರ್ಯಗಳು ದಿನಾ ನಡೆಯ ತೊಡಗಿದುವು. ಹಣ ನೀರಿನ ಹಾಗೆ ಖರ್ಚಾಗುತ್ತಿದ್ದಿತು. ಯಾರ ಬಾಯಿಯಲ್ಲಿ ನೋಡಿದರೂ ಧನಗುಪ್ತ ವರ್ತಕನ ಮಾತೇ ಮಾತು.

ಆದರೆ ಧನಗುಪ್ತನಿಗೆ ಇದರಿಂದ ಪುಣ್ಯ ಬಂದು ದೊಂದೂ ಗೊತ್ತಾಗಲಿಲ್ಲ, ಅದಕ್ಕೆ ಬದಲಾಗಿ ಅವನಿಗೆ ಕೇಡುಕೇ ಕಾಣ ತೊಡಗಿತು. ಅವನು ಪರ ದೇಶದಲ್ಲಿ ಮೊದಲಬಾರಿ ನಕಲೀ ವಜ್ರಗಳ ಮೋಸ ಗಾರನೆಂದು ಸಿಕ್ಕಿಬಿದ್ದು ಜುಲುಮಾನಾ ಶಿಕ್ಷೆಗೆ ಒಳ ಪಟ್ಟನು. ಅದರಿಂದ ತನ್ನ ಯಾವತ್ತೂ ಸರಕುಗಳನ್ನು ಕಳೆದುಕೊಂಡು, ಒಂದು ವರ್ಷದವರೆಗೆ ಅಲ್ಲಿಯ ಕಾರಾಗೃಹದಲ್ಲಿದ್ದು, ಜತೆ ವರ್ತಕರ ಮುಂದೆ ಅವ ಮಾನಕ್ಕೀಡಾಗಿ, ಬರಿಗೈಯಲ್ಲಿ ಮುಖ ಬಾಡಿಸಿ ಕೊಂಡು ಒಂದುದಿನ ಮನೆಗೆ ಬಂದು ಮುಟ್ಟಿದನು. ಅಲ್ಲ ಅವನಿಗಾಗಿ ಗಾಬರಿಯೇ ಕಾದಿತ್ತು.

ಮನೆಯಲ್ಲಿ ಅವನಿಗೆ ಗೋಡೆಗಳ ಹೊರತು ಮತ್ತೇನೂ ತೋರಲಿಲ್ಲ. ಮನೆ ಸರ್ವ ಮಂಗಳ





ವಾಗಿಯೂ ಹೊಳೆಯುತಿದ್ದುವು. ತಾನು ಬಂದ ಸಮಾಚಾರ ಹೇಳಿ ಕಳುಹಿಸಿದರೂ ಹೆಂಡತಿ ಮನೆಗೆ ಬರಲಿಲ್ಲ. ಬೇಸರದಿಂದ ಅವನೇ ಧರ್ಮಛತ್ರಕ್ಕೆ ಹೋಗಿ, ದಾನಮಾಡುತ್ತಿರುವ ಹೆಂಡತಿಯನ್ನೂ, ಅಲ್ಲಿ ನೆರೆದ ಜನರನ್ನೂ ನೋಡಿದನು.

ಧನಗುಪ್ತನನ್ನು ಯಾರೂ ಗುರುತಿಸಲಿಲ್ಲ. ಅವನ ಹೆಂಡತಿ ಎಲ್ಲರಿಗೂ ದಾನಧರ್ಮ ಮಾಡುತ್ತ, ಗಂಡನ ಕೈಗೂ ಒಂದಿಷ್ಟು ಪ್ರಸಾದದ ಮುದ್ದೆ ಹಾಕಿ, "ನೀವು ಬಂದ ಸಮಾಚಾರ ಗೊತ್ತಾಯಿತು. ನೋಡಿದಿರಷ್ಟೆ? ಇವರೆಲ್ಲರನ್ನೂ ಅರ್ಧದಲ್ಲೇ ಬಿಟ್ಟು ಬರಲು ಸಾಧ್ಯವಾಗಲಿಲ್ಲ" ಎಂದಳು.

ಧನಗುಪ್ತನು ಸಿಟ್ಟುಬೆಂಕಿಯಾಗಿ, ಕೈಯಲ್ಲಿರುವ ಮುದ್ದೆಯನ್ನು ಅವಳ ಮುಖಕ್ಕೆ ಹೊಡೆದು, "ನೀಚಳೇ, ನಿನಗೆ ನನಗಿಂತಲೂ ಈ ಸೋಮಾರಿಗಳೇ ಹೆಚ್ಚಾದರೆ? ಮನೆಯನ್ನೆಲ್ಲಾ ಬೋಳುಮಾಡಿದೆ. ಹೀಗೆ ಮಾಡಲಿಕ್ಕೆ ಹೇಳಿದೆನೇನು? ಯಾವುದಕ್ಕೂ ಒಂದು ಲೆಕ್ಕಪಕ್ಕ ಬೇಡವೆ? ಸಾಕು ನಿನ್ನ ಈ ಕರ್ಮ, ಈ ಕ್ಷಣವೇ ಮನೆಗೆ ನಡೆ!" ಎಂದು ಜರೆದ.

ತಾನು ಮಾಡುವ ದಾನಧರ್ಮಗಳಿಂದ ಇಷ್ಟು ದೊಡ್ಡ ಕಷ್ಟ ಬರುತ್ತದೆಂದು ಧನಗುಪ್ತನ ಹೆಂಡತಿ ಊಹಿಸಿರಲಿಲ್ಲ. ಅವಳು ಕೂಡಲೇ ಛತ್ರವನ್ನು ಖಾಲೀ ಮಾಡಿಸಿ ಮನೆಗೆ ಹೋದಳು.

ಅವಳು ಹೆದರುತ್ತ ಗಂಡನನ್ನು ನೋಡಿ, "ನಾನು ಮಾಡಿದ ಪುಣ್ಯಕಾರ್ಯಗಳ ಫಲವೆಲ್ಲ ಏನಾಯಿತೋ? ನಿಮಗೆ ವ್ಯಾಪಾರದಲ್ಲಿ ಇಷ್ಟು ದೊಡ್ಡ ನಷ್ಟ ಏಕೆ ಬಂದಿತೋ?" ಎಂದು ಕೇಳಿದಳು.

"ಆ ಪ್ರಶ್ನೆಯ ಗೊಡವೆ ನಿನಗೆ ಬೇಡ. ನಾನು ನೋಡಿಕೊಳ್ಳುತ್ತೇನೆ. ನಿನ್ನ ಧರ್ಮಕರ್ಮ ಎಲ್ಲಾ ನಿಲ್ಲಿಸಿ ಸುಮ್ಮನಿರು. ಪುಣ್ಯಕರ್ಮ ವಿಪರೀತವಾಯಿತು. ಹೆಚ್ಚಾದರೆ ಅಮೃತವೂ ವಿಷವಾಗುತ್ತದೆ" ಎಂದ ಧನಗುಪ್ತ.

ವ್ಯಾಪಾರದಲ್ಲಿ ಚೆನ್ನಾಗಿ ನುರಿತಿದ್ದ ಧನಗುಪ್ತನು ತನ್ನ ಕಾರ್ಯಬಿಡದೆ ಇದ್ದುಬಿದ್ದುದನ್ನೇ ಕೂಡಿಸಿ ಮತ್ತೆ ವ್ಯಾಪಾರಕ್ಕೆ ತೊಡಗಿ ಲಾಭದ ಮೇಲೆ ಲಾಭವನ್ನು ಕೂಡಿ ಹಾಕ ತೊಡಗಿದ. ನಕಲೀ ವಜ್ರಗಳ ವ್ಯಾಪಾರದಲ್ಲಿ ಅವನು ಬಹುಬೇಗನೇ ಹಿಂದಿನಷ್ಟೇ ಧನವಂತನಾಗಿಬಿಟ್ಟ. ಯಾವನೋ ಬೀದಿ ಸನ್ಯಾಸಿಯ ಮಾತು ಕೇಳಿ ಹಾಳು ಕೆಲಸ ಮಾಡಿಸಿದೆನಲ್ಲಾ ಎಂದು ಪಶ್ಚಾತ್ತಾಪ ಪಟ್ಟ.

ಹೀಗಿರುವಾಗ ಅಕಸ್ಮಾತ್ತಾಗಿ ಒಂದುದಿನ ಮತ್ತೆ ಅದೇ ಸನ್ಯಾಸಿ ಬೀದಿಯಲ್ಲಿ ಅವನಿಗಿದಿರಾಗಿ ಬಂದ. ಅವನೊಂದಿಗೆ ಈಗ ಇಬ್ಬರು ಶಿಷ್ಯರು ಕೂಡಾ ಇದ್ದರು. ಆ ಸನ್ಯಾಸಿ ಧನಗುಪ್ತನನ್ನು ನೋಡಿ, "ನಿನ್ನಲ್ಲಿ ಯಾವ ಬದಲಾವಣೆಯೂ ಕಾಣುವುದಿಲ್ಲವಲ್ಲಾ? ನಾನು ಹೇಳಿದಂತೆ ನೀನು ಮಾಡಲಿಲ್ಲವೆಂದು ಕಾಣುತ್ತದೆ. ಹೌದಾ?" ಎಂದು ಕೇಳಿದ. ಧನಗುಪ್ತನು ಬಹಳ ಕೋಪದಿಂದ ನೋಡುತ್ತ, "ಸಾಕು

ಬಿಡು. ನೀನೂ ನಿನ್ನ ಸನ್ಯಾಸವೂ! ನೀನೊಬ್ಬ ಶನಿ. ನಿನ್ನ ಮಾತನ್ನು ನಂಬಿ ಸೇರಿಸಿಟ್ಟುದನ್ನೆಲ್ಲಾ ಸಾಧುಗಳಿಗೂ ಸನ್ಯಾಸಿಗಳಿಗೂ ಧಾರೆಯೆರೆದು ಸಾಕಾಯಿತು. ದಿವಾಳಿಯಾಗಿ ಹೋದೆ. ಇನ್ನೆಂದೂ ನಿನ್ನಂಥವರ ಮಾತು ಕೇಳಲಾರೆ. ಸುಮ್ಮನೆ ನಿನ್ನ ದಾರಿ ಹಿಡಿದು ನಡೆ!" ಎಂದ.

"ಮಾಡಿಕೊಂಡ ಪುಣ್ಯ ಕೂಡಾ ಪಾಪದಂತೆಯೇ ಸುಮ್ಮನೆ ಬಿಟ್ಟು ಹೋಗುವುದಿಲ್ಲವಪ್ಪಾ. ಕೋಪಿಸಬೇಡ. ಏನು ನಡೆಯಿತೆಂಬುದನ್ನು ಹೇಳು" ಎಂದು ಸನ್ಯಾಸಿ ಕೇಳಿದ.

"ನನ್ನ ಹೆಂಡತಿ ಮಾಡದ ವ್ರತಗಳೂ, ದಾನಗಳೂ, ಧರ್ಮಗಳೂ ಪೂಜೆಗಳೂ ನಮಸ್ಕಾರಗಳೂ ಎಲ್ಲಿಯೂ ಇಲ್ಲದಷ್ಟು. ಅವುಗಳ ಫಲವೆಲ್ಲ ಏನಾಯಿತೋ ಏನೋ? ನಾನು ಮಾಡಿದ ಪ್ರತಿ ವ್ಯಾಪಾರದಲ್ಲಿಯೂ ನಷ್ಟ ಬಂತು. ನಕಲೀ ವಜ್ರಗಳ ವ್ಯಾಪಾರದಲ್ಲಿ ದೇಶಾಂತರಗಳಲ್ಲಿ ಸಿಕ್ಕಿಬಿದ್ದು ಶಿಕ್ಷೆ ಅನುಭವಿಸಿದ್ದೂ ಆಯಿತು. ಒಂದು ವರ್ಷ ಕಾರಾಗೃಹದಲ್ಲಿದ್ದೆ. ಈಗ ನನ್ನ ಹೆಂಡತಿ ಮಾಡುವ ದಾನಧರ್ಮಗಳನ್ನೆಲ್ಲಾ ನಿಲ್ಲಿಸಿಬಿಟ್ಟೆ. ಮತ್ತೆ ವ್ಯಾಪಾರ ಮಾಡುತ್ತಿದ್ದೇನೆ. ಲಾಭವೂ ಬರುತ್ತಿದೆ. ಲಕ್ಷಾಂತರದಷ್ಟು ಗಳಿಸಿದ್ದೇನೆ. ನನ್ನ ನಕಲೀ ವಜ್ರಗಳು ನಿಜ ವಜ್ರಗಳಾಗಿ ಚಲಾಮಣಿಯಾಗುತ್ತಿವೆ. ಬೇಕಾದರೆ ನೋಡು." ಎಂದು ಧನಗುಪ್ತನು ವಜ್ರಗಳನ್ನು ಅವನಿಗೂ ತೋರಿಸಿದ.

ಸನ್ಯಾಸಿ ಏನೂ ಮಾತಾಡದಿರಲು, "ಈಗ ಹೇಳು ಸನ್ಯಾಸಿಯೇ; ನೀನು ಹೇಳಿದ್ದು ಪುಣ್ಯವೋ ನಾನು ಮಾಡಿದ್ದು ಪುಣ್ಯವೋ? ನಿನ್ನಂತಹ ಕಳ್ಳ ಸನ್ಯಾಸಿಗಳನ್ನು ರಾಜ್ಯದೊಳಗೆ ತಿರುಗಲಿಕ್ಕೆಬಿಡುವಂಥ ಈ ದೇಶದ ರಾಜನಿಗೇ ಬುದ್ಧಿ ಕಡಿಮೆ!" ಎಂದ ಧನಗುಪ್ತ. "ಚೆನ್ನಾಗಿ ಹೇಳಿದೆ" ಎಂದು ಹೇಳಿ ಸನ್ಯಾಸಿ ತನ್ನ ಗಡ್ಡ ಮೀಸೆಗಳನ್ನು ಕಿತ್ತುಕೊಂಡು ನಿಜ ರೂಪದಲ್ಲಿ ನಿಂತ.

ಅವನನ್ನು ನೋಡಿ ಧನಗುಪ್ತನ ನಾಲಗೆ ಪಸೆ ಆರಿತು. ಸಾಕ್ಷಾತ್ ರಾಜನೇ! ಅವನ ಕಣ್ಣು ಸನ್ನೆ



ಯಿಂದ, ರಾಜನೊಂದಿಗಿದ್ದವರು ಕೂಡಾ ತಮ್ಮ ಗಡ್ಡ ಮೀಸೆಗಳನ್ನು ತೆಗೆದು ಹಾಕಿ, ಧನಗುಪ್ತ ವ್ಯಾಪಾರಿಯನ್ನು ನಕಲೀ ವಜ್ರಗಳೊಂದಿಗೆ ಬಂಧಿಸಿದರು.

ತರುವಾಯ ಧನಗುಪ್ತನ ಮೇಲೆ ವಿಚಾರಣೆ ನಡೆಯಿತು. ರಾಜನು ಅವನಿಗೆ ಆ ಜನ್ಮ ಕಾರಾಗೃಹ ವಾಸದ ಶಿಕ್ಷೆ ವಿಧಿಸಿದ. ಅವನನ್ನು ಭಟರು ಕಾರಾಗೃಹಕ್ಕೆ ಕೊಂಡೊಯ್ಯುವಾಗ, ಅವನು ರಾಜನನ್ನು ನೋಡಿ ಕೈ ಮುಗಿದು, "ಮಹಾಪ್ರಭುಗಳೇ, ನನಗೆ ಕೆಲವು ಅನುಮಾನಗಳಿವೆ. ಅಪ್ಪಣೆಯಾದರೆ ಕೇಳುತ್ತೇನೆ" ಎಂದನು.

ರಾಜನು ಕೇಳುವಂತೆ ಹೇಳಲು, "ನನ್ನನ್ನು ಮೊದಲನೇ ಸಾರಿ ನೋಡಿದಾಗಲೇ ಯಾತಕ್ಕೆ ಬಂಧಿಸಲಿಲ್ಲ? ಅದರ ಬದಲಿಗೆ ದಾನಧರ್ಮ ಮಾಡಲು ಹೇಳಿದಿರೇಕೆ? ನನ್ನ ಹೆಂಡತಿ ಸಂಪಾದಿಸಿದ ಪುಣ್ಯವು ನನಗೆ ಒಂದಿಷ್ಟೂ ಉಪಯೋಗವಾಗಲಿಲ್ಲವೇಕೆ?" ಎಂದು ಕೇಳಿದ ಧನಗುಪ್ತ.

ರಾಜನು ಹೀಗೆಂದ: "ಹುಚ್ಚನೇ, ನಿನ್ನನ್ನು ಮೊದಲನೇಸಾರಿ ನೋಡಿದಾಗ ನಿನ್ನನ್ನು ಬಂಧಿಸಲಿಕ್ಕೆ ನನಗೇನು ರುಜುವಾತಿತ್ತು? ನಿನ್ನ ಮುಖ ನೋಡಿ ಅಂದುಕೊಂಡೆ ಅಷ್ಟೇ. ಆಗ ನಿನ್ನಲ್ಲಿ ಆದ ಪಾಪ ಭೀತಿಯನ್ನೂ, ನೀನು ದಾನಧರ್ಮಗಳನ್ನು ಮಾಡಲು ಒಪ್ಪಿಕೊಂಡುದನ್ನೂ ನೋಡಿ ನೀನು ಕಳ್ಳನೆಂಬ ಸಂಗತಿ ನನಗೆ ಗೊತ್ತಾಯಿತು. ಆದರೂ ಆಧಾರವಿಲ್ಲದೆ ಬಂಧಿಸಲು ಸಾಧ್ಯವಿರಲಿಲ್ಲ. ಅಂದಿನಿಂದ ನನ್ನ ಗೂಢಚಾರರು ನಿನ್ನ ಹಿಂದೆಯೇ ಇದ್ದರು. ನೀನು ಯಾವ ದೇಶದಲ್ಲಿ ಏನೇನು ಮಾಡುವಿಯೋ ಆಗಿಂದಾಗಲೇ ನನಗೆ ಗೊತ್ತಾಗುತಿತ್ತು. ಇನ್ನು ನಿನ್ನ ಎರಡನೆ ಪ್ರಶ್ನೆಗೆ ಸಮಾಧಾನವೇನೆಂದರೆ, ನಿನ್ನಂತಹ ಪಾಪಿಗಳು ಪುಣ್ಯ ಮಾಡಿದರೆ ಆ ಪುಣ್ಯವೇ ಅವರಿಗೆ ಶತ್ರುವಾಗಿ ಪರಿಣಮಿಸುತ್ತದೆಂದು ತಿಳಿ. ಅದು ನಿನ್ನಿಂದ ಒಳ್ಳೆಯ ಕೆಲಸಗಳನ್ನು ಮಾಡಿಸಬೇಕೆಂದು ಹೇಳಿಸಿ, ನಿನ್ನ ಮೋಸಗಳಿಗೆ ವಿಘ್ನಗಳನ್ನೊಡ್ಡುತ್ತಾ ಇರುತ್ತದೆ. ನಿನ್ನ ಒಳಿತಿಗಾಗಿಯೇ ಅದು ಹಾಗೆ ಮಾಡುವುದು. ನಿನ್ನ ಹೆಂಡತಿ ಕೊಟ್ಟ ಪ್ರಸಾದವನ್ನು ನೀನು ಅವಳ ಮುಖಕ್ಕೆ ಬೀಸಿದೆ. ಅಷ್ಟರ ಮಟ್ಟಿಗೆ ನಿನ್ನ ಪುಣ್ಯಫಲಿತವು ದೂರವಾಗಿ ಹೋಯಿತು. ಮತ್ತೆ ನಿನ್ನಲ್ಲಿ ಪಾಪಬುದ್ಧಿ ಸೇರಿಕೊಂಡು ನಿನ್ನ ಆಟಗಳು ನಿರಾಟಂಕವಾಗಿ ಸಾಗುವಂತೆ ಮಾಡಿತು. ಈ ವಿಧವಾಗಿ ಅದು ನಿನ್ನ ಪತನಕ್ಕೇ ಸಹಾಯವಾಯಿತು. ಪುಣ್ಯಕಾರ್ಯ ಎಷ್ಟೇ ಮಾಡಿದರೂ ಕೆಟ್ಟ ಕೆಲಸಗಳನ್ನು ಮನಃಪೂರ್ವಕವಾಗಿ ಬಿಡದಿದ್ದರೆ ಆ ಪುಣ್ಯಗಳಿಂದ ಕಾಸಿನ ಪ್ರಯೋಜನವೂ ಇಲ್ಲ."

ರಾಜನ ಮಾತುಗಳನ್ನು ಕೇಳಿ, ಧನಗುಪ್ತನು ಸಣ್ಣ ಮುಖ ಮಾಡಿಕೊಂಡು ಕಾರಾಗೃಹಕ್ಕೆ ಹೋದ.





# ನಿಜವಾದ ಸಂತೋಷ

ಒಂದು ಊರಿನಲ್ಲಿ ಒಬ್ಬ ಗೃಹಸ್ಥನಿಗೆ ಮೂವರು ಗಂಡು ಮಕ್ಕಳಿದ್ದರು. ಆ ಗೃಹಸ್ಥನಿಗೆ ಖಜಾನೆಯ ಕಾರ್ಯಾಲಯದಲ್ಲಿ ಲೆಕ್ಕ ಬರೆಯುವ ಕೆಲಸ. ತಕ್ಕಷ್ಟು ಆದಾಯವಿರುವ ಅವನು ಮಕ್ಕಳಿಗೆ ಯಾವ ಕೊರತೆಯೂ ಬಾರದಂತೆ ಪೋಷಿಸಿಕೊಂಡು ಬಂದನು. ಕ್ರಮೇಣ ಅವನಿಗೆ ಪ್ರಾಯ ಮೀರಿ ಆರೋಗ್ಯ ಕೆಟ್ಟು ಹೋದುದರಿಂದ, ಕೆಲಸದಿಂದ ಮುಕ್ತನಾಗಿ ಮನೆಯಲ್ಲಿಯೇ ವಿಶ್ರಾಂತಿ ತೆಗೆದುಕೊಂಡಿದ್ದನು.

ತಂದೆಯೇನೋ ಒಂದು ಕೆಲಸದಲ್ಲಿದ್ದು ಚೆನ್ನಾಗಿಯೇ ಸಂಪಾದಿಸಿದರೂ ಮಕ್ಕಳು ಮಾತ್ರ ಯಾವ ಉದ್ಯೋಗಕ್ಕೂ ಪ್ರಯತ್ನ ಮಾಡದೆ, ಸುಮ್ಮನೆ ತಿಂದು ತಿರುಗಿಕೊಂಡಿದ್ದರು. ಅದನ್ನು ನೋಡಿ ತಂದೆ ಮೂವರು ಮಗಂದಿರನ್ನೂ ತನ್ನ ಬಳಿಗೆ ಕರೆದು, "ಹೀಗೆ ನೀವು ಏನೂ ಮಾಡದೆ ಸುಮ್ಮನಿದ್ದರೆ ಪ್ರಯೋಜನವಿಲ್ಲ. ಇಷ್ಟು ದಿನ ನಾನು ನಿಮ್ಮನ್ನು ಪೋಷಿಸಿದೆ. ಈಗ ನಾನು ಶಕ್ತಿಯುಡುಗಿ ಮೂಲೆ ಸೇರಿದ್ದೇನೆ. ನಿಮಗೆ ವಯಸ್ಸು ಕೂಡ ಬಂದಿದೆ. ಇನ್ನು ನೀವೇ ನನ್ನನ್ನು ಪೋಷಿಸಬೇಕು. ನಿಮಗೆ ಒಬ್ಬೊಬ್ಬರಿಗೆ ನೂರು ರೂಪಾಯಿ ಕೊಡುತ್ತೇನೆ. ಅವುಗಳನ್ನು ತೆಗೆದುಕೊಂಡು ನೀವು ಎಲ್ಲಿಗಾದರೂ ಹೋಗಿರಿ. ಏನಾದರೂ ಮಾಡಿರಿ. ಒಂದು ವರ್ಷದಲ್ಲಿ ನೀವು ನನಗೆ ಸಂತೋಷವಾಗುವಂತಹ ಕೆಲಸ ಮಾಡಿ ಹಿಂದಿರುಗಿ ಬನ್ನಿ." ಎಂದನು.

ಅದರಂತೆ ಮೂವರೂ ಮೂರು ದಾರಿ ಹಿಡಿದು ಹೊರಟರು. ಐಶ್ವರ್ಯಕ್ಕಿಂತಲೂ ಮನುಷ್ಯನನ್ನು ಸಂತೋಷ ಪಡಿಸುವಂಥಾದ್ದು ಯಾವುದೂ ಇಲ್ಲವೆಂದುಕೊಂಡು ಮೊದಲನೆಯವನು ನಗರಕ್ಕೆ ಹೋಗಿ ಒಬ್ಬ ದೊಡ್ಡ ಧನಿಕನ ಮನೆಯಲ್ಲಿ ಕೆಲಸಕ್ಕೆ ನಿಂತು, ಬಿಡುವಿನ ವೇಳೆಯಲ್ಲಿ, ಭಾರಹೊರುವ ಕೂಲಿ ನಾಲಿ ಮುಂತಾದ ಯಾವ ಕೆಲಸವನ್ನಾದರೂ ಮಾಡಿದನು. ಯಾವ ಸಂಕೋಚವೂ ಇಲ್ಲದೆ ಹಣ ಸಂಪಾದನೆಯೇ ಗುರಿಯಾಗಿಟ್ಟುಕೊಂಡು ದುಡಿದನು. ಒಂದು ವರ್ಷದಲ್ಲಿ ಅವನ ಹತ್ತಿರ ಹತ್ತು ಸಾವಿರ ರೂಪಾಯಿ ಸೇರಿತು. ಅವನು ಅದರಿಂದ ಒಂದು ಒಳ್ಳೆಯ ರತ್ನವನ್ನು ಕೊಂಡುಕೊಂಡು ಮನೆಗೆ ತಂದು ತನ್ನ ತಂದೆಗೆ ಕೊಟ್ಟನು. ಅವನ ಸಂಗತಿಯನ್ನು ತಿಳಿದು ತಂದೆ, "ಅಯ್ಯೋ, ಮಗನೇ. ಧನವೇ ಪ್ರಧಾನವೆಂದು ತಿಳಿದು ಮಾನಮರ್ಯಾದೆ ಬಿಟ್ಟು ಹೀನ ಕೆಲಸಗಳಿಂದ

ವಿ. ಕುಪ್ಪುರಾಜ

ಸೊರಗಿ ಹೇಗಾದೆಯಲ್ಲ? ನಿನ್ನನ್ನು ನೋಡಿದರೆ ನನಗೆ ದುಃಖವಾಗುತ್ತದೆ" ಎಂದನು.

ಎರಡನೆಯವನು ಒಬ್ಬ ಸಿದ್ಧ ವೈದ್ಯನ ಹತ್ತಿರ ಶಿಷ್ಯನಾಗಿ ಸೇರಿ, ಬಹಳ ಶ್ರದ್ಧೆ ಭಕ್ತಿಗಳಿಂದ ಅವನ ಸೇವೆ ಮಾಡಿ ಮೆಚ್ಚಿಸಿ, ವೃದ್ಧಾಪ್ಯವನ್ನೂ, ವೃದ್ಧಾಪ್ಯದಲ್ಲಿ ಬರುವ ವ್ಯಾಧಿಗಳನ್ನೂ ನಿವಾರಿಸುವ ಒಂದು ಅಮೂಲ್ಯ ಔಷಧವನ್ನು ಸಂಪಾದಿಸಿಕೊಂಡು ಮನೆಗೆ ಬಂದು ಆ ಔಷಧವನ್ನು ತಂದೆಗೆ ಕೊಟ್ಟನು.

"ನನಗೆ ಈ ಔಷಧವೇಕೆ ಮಗನೇ? ನಾನು ಸಮಸ್ತ ಸುಖಗಳನ್ನೂ ಅನುಭವಿಸಿಯಾಯಿತು. ಕೃತ್ರಿಮವಾಗಿ ತಂದುಕೊಂಡ ಯೌವನದಿಂದ ನನಗೇನೂ ಸಂತೋಷವಿಲ್ಲ. ಇದಕ್ಕೆ ನಾನು ಸಂತೋಷ ಪಡುವೆನೆಂದು ನೀನು ಅಂದು ಕೊಂಡುದಕ್ಕೆ ನನಗೆ ತುಂಬಾ ಚಿಂತೆಯಾಗಿದೆ." ಎಂದ ತಂದೆ.

ಮೂರನೆಯವನು ಮುದುಕನಾದ ಒಬ್ಬ ಗುರುವಿನಬಳಿಗೆ ಹೋಗಿ, "ತಂದೆಗೆ ಸಂತೋಷವಾಗ ಬೇಕಾದರೆ ಮಗನು ಏನು ಮಾಡಬೇಕು?" ಎಂದು ಕೇಳಿದ. "ನಿನಗೆ ಅಭಿಮಾನವಿರುವ ವಿದ್ಯೆ ಯಾವುದು?" ಎಂದು ಆ ವೃದ್ಧಗುರು ಕೇಳಿದ.

"ನನಗೆ ಸಂಗೀತವೆಂದರೆ ಬಹಳ ಇಷ್ಟ" ಎಂದ ಮೂರನೆಯವ. "ಹಾಗಾದರೆ ಅದನ್ನೇ ಕಲಿ. ಅದರಲ್ಲಿ ನೀನು ಪ್ರವೀಣನಾದರೆ ನಿನ್ನ ತಂದೆ ಸಂತೋಷಪಡುತ್ತಾರೆ" ಎಂದ ವೃದ್ಧಗುರು. ಅದರಂತೆ ಮೂರನೇಯವನು ಒಬ್ಬ ಸಂಗೀತ ವಿದ್ವಾಂಸರ ಮನೆಗೆ ಹೋಗಿ, ತನ್ನ ಹತ್ತಿರವಿರುವ ಎಲ್ಲಾ ಹಣವನ್ನೂ ಅವರಿಗೆ ಕೊಟ್ಟನು. ಅವರ ಹತ್ತಿರ ಸಂಗೀತ ಕಲಿಯುತ್ತ, ರಾತ್ರೀ ಹಗಲೂ ಸಾಧನೆ ಮಾಡಿದನು. ಒಂದು ವರ್ಷದಲ್ಲಿ ಅವನು ಒಳ್ಳೆಯ ಸಂಗೀತ ವಿದ್ವಾಂಸನಾಗಿ ದೇವಾಲಯದಲ್ಲಿ ಹಾಡಲು ತೊಡಗಿದನು. ಅವನ ಹಾಡನ್ನು ಕೇಳಿ ರಸಿಕರು ತನ್ಮಯರಾಗಿ ಬೇರೆಬೇರೆ ವಿಶೇಷಗಳಿಗೆ ಕರೆಯಲಾರಂಭಿಸಿದರು. ರಾಜನಿಗೂ ಅವನ ಸುದ್ದಿ ತಿಳಿಯಿತು.

ರಾಜನು ಅವನನ್ನು ಆಹ್ವಾನಿಸಿ ಆಸ್ಥಾನದಲ್ಲಿ ಹಾಡಿಸಿದನು. ಎಲ್ಲರೂ ಅವನ ಗಾನ ಮಾಧುರ್ಯವನ್ನು ಮೆಚ್ಚಿಕೊಂಡರು. ರಾಜನು ಅವನಿಗೆ ಆಸ್ಥಾನ ವಿದ್ವಾಂಸ ಪದವಿಯನ್ನೇ ಕೊಟ್ಟನು.

ಆಗ ಮೂರನೆಯವನು ತಾನು ತಂದೆಯನ್ನು ನೋಡಿಬರಲು ಮಹಾರಾಜನಿಂದ ಅನುಮತಿಯನ್ನು ಪಡೆದು ರಾಜನು ಕೊಟ್ಟ ಕಾಣಿಕೆಗಳನ್ನು ತೆಗೆದುಕೊಂಡು ಮನೆಗೆ ಬಂದನು. ತಂದೆ ಆ ಮಗನನ್ನು ನೋಡಿ ಬಹಳ ಸಂತೋಷಪಟ್ಟು, "ಇದೇ ತಂದೆಗೆ ನಿಜವಾದ ಸಂತೋಷ. ಮಗನು ಕೀರ್ತಿಶಾಲಿಯಾಗುವಂತಹ ಕೆಲಸ ಮಾಡಿದರೇನೇ ತಂದೆಗೆ ಧನ್ಯತೆಯುಂಟಾಗುತ್ತದೆ." ಎಂದನು.





# ದುರಾಶೆ

ದೊಡ್ಡದಾದೊಂದು ಪುಣ್ಯಕ್ಷೇತ್ರವಿದ್ದಿತು. ಅದು ಬಹಳ ಪ್ರಸಿದ್ಧ ಯಾತ್ರಾ ಸ್ಥಳವಾದುದರಿಂದ ಪ್ರತಿ ದಿನವೂ ಅಲ್ಲಿಗೆ ಅನೇಕಮಂದಿ ಯಾತ್ರಿಕರು ಬರುತ್ತಿದ್ದರು. ಅವರಿಗಾಗಿ ಅಲ್ಲಿ ಅನೇಕ ಧರ್ಮಶಾಲೆಗಳೂ ಇದ್ದುವು. ಒಂದೊಂದು ಧರ್ಮಶಾಲೆಯಲ್ಲಿಯೂ ಒಬ್ಬೊಬ್ಬ ನೌಕರನೂ ಇದ್ದನು. ಧರ್ಮಶಾಲೆಯನ್ನು ಶುಭ್ರವಾಗಿಟ್ಟು, ಅದರಲ್ಲಿ ಇಳಿದುಕೊಳ್ಳುವ ಯಾತ್ರಿಕರಿಗೆ ಅಗತ್ಯವಾದ ಸೌಕರ್ಯಗಳನ್ನು ಮಾಡಿಸುವುದು ಆ ನೌಕರರ ಕೆಲಸ.

ಹೀಗೆ ಏರ್ಪಡಿಸಲಟ್ಟ ನೌಕರರಲ್ಲಿ ರಂಗಣ್ಣನೆಂಬವನು ಬಹಳ ಪ್ರಾಮಾಣಿಕನಾಗಿದ್ದ. ತನ್ನ ಕೆಲಸದಲ್ಲಿ ತುಂಬ ಎಚ್ಚರಿಕೆಯಿಂದಿದ್ದ. ಒಂದುದಿನ ರಂಗಣ್ಣ ನೌಕರಿ ಮಾಡುವ ಧರ್ಮಶಾಲೆಗೆ ಬಂದು ಇಳಿದಿದ್ದ ಯಾತ್ರಿಕನೊಬ್ಬ ಏನೋ ತಪ್ಪು ಅಥವಾ ಮರೆವಿನಿಂದ ಒಂದು ಚಿನ್ನದ ಗೊಲಸನ್ನು ಕೋಣೆಯ ಒಂದು ಬದಿಯಲ್ಲಿ ಬಿಟ್ಟು ಹೊರಟುಹೋಗಿ ಬಿಟ್ಟಿದ್ದ. ಬಹಳ ಹೊತ್ತಾದ ಮೇಲೆ ಅದು ರಂಗಣ್ಣನ ಕಣ್ಣಿಗೆ ಬಿತ್ತು. ಪ್ರಾಮಾಣಿಕನಾದ ರಂಗಣ್ಣ ಆ ಕೂಡಲೇ ಅದನ್ನು ತೆಗೆದುಕೊಂಡು ಹೋಗಿ ದೇವಾಲಯದ ಧರ್ಮಕರ್ತನಿಗೆ ಕೊಟ್ಟುಬಿಟ್ಟ. ಮನಸ್ಸು ಮಾಡಿದ್ದರೆ ರಂಗಣ್ಣನಿಗೆ ಅದನ್ನು ಮರೆಸಿ ತಾನೇ ಉಪಯೋಗಿಸಿಕೊಳ್ಳಬಹುದಿತ್ತು. ಅವನು ಹಾಗೆ ಮಾಡದೆ ನ್ಯಾಯವಾಗಿ ನಡೆದುಕೊಂಡುದನ್ನು ನೋಡಿ ದೇವಾಲಯದ ನಿರ್ವಾಹಕರು ಅವನನ್ನು ಮೆಚ್ಚಿ ಅವನಿಗೆ ಐವತ್ತು ರೂಪಾಯಿಗಳನ್ನು ಬಹುಮಾನ ಕೊಟ್ಟರು.

ಅಂದಿನಿಂದ ದೇವಾಲಯದ ಪಾಲಕವರ್ಗದವರು, ಪ್ರಾಮಾಣಿಕರಾಗಿರುವ ದೇವಾಲಯದ ಎಲ್ಲ ಊಳಿಗದವರಿಗೂ, ಐವತ್ತು ರೂಪಾಯಿ ಬಹುಮಾನ ಕೊಡಬೇಕೆಂದು ನಿರ್ಣಯಿಸಿದರು. ಹೀಗೆ ಮಾಡುವುದರಿಂದ ದೇವಸ್ಥಾನಕ್ಕೆ ಒಳ್ಳೆಯ ಹೆಸರು ಬರುವುದೆಂದೂ ಅವರಿಗೆ ತೋರಿತು. ಈ ನಿರ್ಣಯವನ್ನು ಎಲ್ಲಾ ಸೇವಕರಿಗೂ ತಿಳಿಸಲಾಯಿತು.

ಧರ್ಮಶಾಲೆಗಳನ್ನು ನೋಡಿಕೊಳ್ಳುವ ನೌಕರರಲ್ಲಿ ಸೋಮಪ್ಪನೆಂಬೊಬ್ಬನಿದ್ದ. ಅವನು ರಂಗಣ್ಣನಂತೆ ನಿಜವಾದ ಪ್ರಮಾಣಿಕ ಬುದ್ಧಿಯವನಲ್ಲ. ಬಹುಮಾನದ ಸಮಾಚಾರ ಗೊತ್ತಾದ ಕೂಡಲೇ ಅವನ ಮನಸ್ಸಿನಲ್ಲಿ ದುರಾಶೆಯು ಮಿಂಚಿದ್ದು ದುರ್ಬುದ್ಧಿಯು

ಕೆ. ಕೃಷ್ಣಯ್ಯರ್

ಪ್ರಕಾಶ ಹರಡಿಸಿತು. ಆ ಕೆಟ್ಟ ಪ್ರಕಾಶದಲ್ಲಿ ಸೋಮಪ್ಪ ಒಂದು ಉಪಾಯ ಮಾಡಿದ. ಅವನ ದೂರದ ಬಂಧುವೊಬ್ಬನು ಯಾತ್ರಿಗೆ ಬಂದವನಂತೆ ನಟಿಸುತ್ತಾ ಬಂದು ಸೋಮಪ್ಪನ ಅಧೀನದಲ್ಲಿರುವ ಧರ್ಮಶಾಲೆಯಲ್ಲಿ ತಂಗಿ, ಅಲ್ಲಿಂದ ಹೋಗುವಾಗ ಯಾವುದೋ ಒಂದು ಚಿನ್ನದ ಒಡವೆಯನ್ನು ಅಥವಾ ಬೆಲೆ ಬಾಳುವ ಏನೋ ಒಂದು ವಸ್ತುವನ್ನು ಬಿಟ್ಟು ಹೊರಟು ಹೋಗುವುದೂ, ಸೋಮಪ್ಪ ಅದನ್ನು ತೆಗೆದುಕೊಂಡು ಹೋಗಿ ಧರ್ಮಕರ್ತನಿಗೆ ಕೊಟ್ಟು ಐವತ್ತು ರೂಪಾಯಿ ಬಹುಮಾನ ಪಡೆಯುವುದೂ, ಆಮೇಲೆ ಆ ದೂರದ ಬಂಧು ಅಲ್ಲಿಗೆ ಬಂದು ತಾನು ಕಳೆದುಕೊಂಡ ವಸ್ತುಗಳ ಗುರುತು ಹೇಳಿ ಅವುಗಳನ್ನು ಪಡೆದುಕೊಳ್ಳುವುದೂ ಆಗಾಗ ನಡೆಯ ತೊಡಗಿತು. ಈ ಮೋಸದ ಬಲೆಯಲ್ಲಿ ಸೋಮಪ್ಪ ಬಹಳ ಹಣ ಸಂಪಾದಿಸುತ್ತಿದ್ದ. ಇದಕ್ಕೆ ಸಹಾಯ ಮಾಡಿದ 'ಬಂಧು'ಗಳಿಗೂ ಅಷ್ಟಿಷ್ಟು ಕೊಡುತ್ತಿದ್ದ.

ಆಗಾಗ ಹೀಗಾಗುವುದನ್ನು ನೋಡಿ ಧರ್ಮಕರ್ತನಿಗೆ ಅನುಮಾನ ಬಂದಿತು. ಏಕೆಂದರೆ, ಈ ಬಹುಮಾನ ನಿರ್ಣಯ ನಡೆದನಂತರ ಯಾತ್ರಿಕರು ಧರ್ಮಶಾಲೆಯಲ್ಲಿ ವಸ್ತು ಒಡವೆಗಳನ್ನು ಮರೆತು ಹೋಗುವುದು ಹೆಚ್ಚಾಯಿತು. ಅದೂ ಸೋಮಪ್ಪನ ಅಧೀನದಲ್ಲಿರುವ ಧರ್ಮಶಾಲೆಯಲ್ಲೇ ಹಾಗಾಗುತ್ತಿತ್ತು. ಇದರಲ್ಲಿ ಏನೋ ವಿಶೇಷ ಇರಬೇಕೆಂದು ಸಂದೇಹಪಟ್ಟು ಧರ್ಮಕರ್ತನು ಅದನ್ನು ಪರೀಕ್ಷಿಸಲು ನಿಶ್ಚಯಿಸಿದನು.

ಒಂದುದಿನ ಧರ್ಮಕರ್ತ ತನ್ನ ಬಂಧುವೊಬ್ಬನನ್ನು ಸೋಮಪ್ಪನಿರುವ ಧರ್ಮಶಾಲೆಗೆ ಯಾತ್ರಿಕನಾಗಿ ಬರುವಂತೆ ಏರ್ಪಡಿಸಿದನು. ಅವನು ಅಲ್ಲಿಂದ ಹೊರಟುಹೋಗುವಾಗ ಬೇಕೆಂತಲೇ ಒಂದು ವಜ್ರದ ಉಂಗುರವನ್ನು ಕೋಣೆಯೊಳಗೆ ಸುಲಭದಲ್ಲಿ ಕಾಣುವ ಸ್ಥಳದಲ್ಲಿ ಬಿಟ್ಟುಹೋದನು. ಸಹಜವಾಗಿ ಅದು ಸೋಮಪ್ಪನ ಕಣ್ಣಿಗೆ ಬಿತ್ತು. ಅದನ್ನು ಹೊರಗೆ ಎಲ್ಲಿ ಮಾರಿದರೂ ಐನೂರು ರೂಪಾಯಿ ಕಣ್ಣು ಮುಚ್ಚಿ ಕೊಡುವರು. ಧರ್ಮಕರ್ತನಿಗೆ ಕೊಟ್ಟರೆ ಐವತ್ತು ರೂಪಾಯಿಷ್ಟೇ ಬಹುಮಾನ ಬರುತ್ತೆ. ಆದುದರಿಂದ ಸೋಮಪ್ಪ ಅದನ್ನು ಅಡಗಿಸಿಕೊಂಡು ತನ್ನ ಮನೆಗೆ ಒಯ್ದನು. ತನ್ನ ಬೆನ್ನ ಹಿಂದೆ ಒಬ್ಬ ಅಧಿಕಾರಿ ಬರುತ್ತಿರುವ ಸಂಗತಿ ಅವನಿಗೆ ತಿಳಿಯದು.

ಸೋಮಪ್ಪ ತನ್ನ ಮನೆಯನ್ನು ಪ್ರವೇಶಿಸುವುದರೊಳಗೆ ಇಬ್ಬರು ರಕ್ಷಕಭಟರು ಅವನನ್ನು ನಿಲ್ಲಿಸಿ ಝಡತೀ ಮಾಡಿ, ಉಂಗುರವನ್ನು ತೆಗೆದುಕೊಂಡು, ಅವನ ಕೈಗಳಿಗೆ ಬೇಡಿ ತಗಲಿಸಿ ತಮ್ಮೊಂದಿಗೆ ಎಳೆದುಕೊಂಡುಹೋದರು.






ಅರ್ಥಿನಾಮುಪಪನ್ನಾನಾಂ
ಪೂರ್ವಂ ಚಾಪ್ಯುಪಕಾರಿಣಾಂ
ಆಶಾಂ ಸಂಶ್ರಿತ್ಯಯೋ. ಹನ್ತಿ
ಸ ಲೊಕೇ ಪುರುಷಾಧಮಃ ೧.

ಪೂರ್ವದಲ್ಲಿ ತನಗೆ ಉಪಕಾರ ಮಾಡಿದವರೂ ಯೋಗ್ಯರೂ ಆದವರು ಸಹಾಯ ಕೇಳಿದಾಗ ಮಾತು ಕೊಟ್ಟು ವಂಚನೆ ಮಾಡುವವನು ಲೋಕದಲ್ಲೇ ಅಧಮನು.

ಶುಭಂ ವಾ ಯದಿ ವಾ ಪಾಪಂ
ಯೋಹಿ ವಾಕ್ಯಮುದೀರಿತಂ
ಸತ್ಯೇನ ಪ್ರತಿಗೃಣ್ಣಾತಿ
ಸ ವೀರಃ ಪುರುಷೋತ್ತಮಃ ೨.

ಒಳ್ಳೆಯದೇ ಆಗಲಿ, ಕೆಟ್ಟುದೇ ಆಗಲಿ, ತಾನು ಕೊಟ್ಟ ಮಾತನ್ನು ಪಾಲಿಸುವವನೇ ವೀರನೂ ಪುರುಷೋತ್ತಮನೂ ಎನಿಸುವನು.

ಕೃತಾರ್ಥಾಹ್ಯಕೃತಾರ್ಥಾನಾಂ
ಮಿತ್ರಾಣಾಂ ನ ಭವನ್ತಿ ಯೇ
ತಾ ನ್ಮೃತಾನಪಿ ಕ್ರವ್ಯಾದಾಃ
ಕೃತಘ್ನಾನ್ನೋಪ ಭುಂಜತೇ ೩.

ಉಪಕಾರಮಾಡಿದ ಮಿತ್ರರಿಗೆ ಅಗತ್ಯಬಿದ್ದಾಗ ಪ್ರತ್ಯುಪಕಾರ ಮಾಡದವರನ್ನು ಸತ್ತಮೇಲೆ ಕಾಗೆ ಹದ್ದುಗಳೂ ಸಹಾ ತಿನ್ನಲಾರವು.

ಪ್ರತ್ಯುಪಕಾರ

Photo by Anant Desai



ಬಹುಮಾನ
ಪಡೆದ ಶೀರ್ಷಿಕೆ

**ಹೀಗೇ ಹಿಡೀರಿ**

ಕಳುಹಿಸಿದವರು:
ಲಕ್ಷ್ಮಣ ಶೆಟ್ಟಿ,

 Photo by Devidas Kasbekar



ಕುಲಗಾರ್ಡನ್ ಹೌಸ್,
ಸುರತಕಲ್ಲು, ಮಂಗಳೂರು.

ಹೇಗೂ ಹಿಡೀಬೋದು

ಬಹುಮಾನ
ಪಡೆದ ಶೀರ್ಷಿಕೆ

## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೦





★ ಮೇಲಿನ ಫೋಟೋಗಳಿಗೆ ಶೀರ್ಷಿಕೆಗಳು ಏಪ್ರಿಲ್ ೧೫ರೊಳಗೆ ತಲಪಬೇಕು.

★ ಶೀರ್ಷಿಕೆಗಳು ಒಂದಕ್ಕೊಂದು ಸರಿಹೊಂದುವಂತಿರಬೇಕು. ಶೀರ್ಷಿಕೆಗಳನ್ನು ಕಾರ್ಡಿನಲ್ಲೇ ಬರೆಯಬೇಕು. ಗೆದ್ದ ಶೀರ್ಷಿಕೆಗಳು ಜೂನ್ ೭೫ರ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.

# ಚಂದಮಾಮ

## ಈ ಸಂಚಿಕೆಯಲ್ಲಿರುವ ಕಥೆಗಳು:



ಎರಡನೇ ಹೊದಿಕೆಯ ಚಿತ್ರ:
ಸ್ನಾನ

ಮೂರನೇ ಹೊದಿಕೆಯ ಚಿತ್ರ:
ಸ್ನಾನಾನಂತರ


Printed by B. V. REDDI at The Prasad Process Private Ltd., and Published by B. VISWANATHA REDDI for Chandamama Publications, 2 & 3, Arcot Road, Madras-600026. Controlling Editor: 'CHAKRAPANI'

# ದಂತಭಕ್ಷಕನ ಗರ್ವ ಭಂಗ

ದಂತಭಕ್ಷಕ ಆಮ್ಲನು (COOH)* ಬಾಯಿಪ್ರದೇಶದ ಮೇಲೆ ದಾಳಿ ಮಾಡುವ ಹೆದರಿಕೆಯನ್ನು ಹುಟ್ಟಿಸಿದ ಮೇಲೆ, ಬಾಯಿಪ್ರದೇಶದ ರಾಷ್ಟ್ರೀಯ ವಿಧಾನ ಸಭೆಯಲ್ಲಿ ಯುದ್ಧ ಸಾಮಗ್ರಿಗಳನ್ನು ಆಮದು ಮಾಡುವ ಬಗ್ಗೆ ಪ್ರಸ್ತಾಪವು ಸ್ವೀಕರಿಸಲ್ಪಡುತ್ತದೆ.



ಶೀಘ್ರದಲ್ಲಿ ಸಾಮಗ್ರಿ ತುಂಬಿದ ಹಡಗು ಬರುತ್ತದೆ.



ಸೈನ್ಯವು ತಡಮಾಡದೆ ದಂತದುರ್ಗವನ್ನು ಬಲಪಡಿಸುವ ಕೆಲಸದಲ್ಲಿ ನಿರತವಾಗುತ್ತದೆ...ಮತ್ತು ಶೀಘ್ರದಲ್ಲಿಯೆ ಅವರ ಕಾರ್ಯವೂ ಪರೀಕ್ಷೆಗೊಳಗಾಗುತ್ತದೆ.




ಒಂದು ರಾತ್ರಿ, ಎಲ್ಲರೂ ನಿದ್ರಿಸುತ್ತಿರುವಾಗ ದಂತಭಕ್ಷಕನ ಸೈನಿಕರು ಅಕಸ್ಮಾತ್ತಾಗಿ ಆಕ್ರಮಿಸುತ್ತಾರೆ.



ಬಾಯಿಪ್ರದೇಶದ ಜನರು ಒಂದುಗೂಡಿ ಆವೇಶದಿಂದ ದಾಳಿಗಾರರನ್ನು ಎದುರಿಸುತ್ತಾರೆ. ಆದರೆ ಅಕಸ್ಮಾತ್ತಾಗಿ ದಾಳಿ ಮಾಡಿದ ದಂತಭಕ್ಷಕನನ್ನು ಅವರಿಗೆ ಸೋಲಿಸುವುದಕ್ಕಾಗುವುದಿಲ್ಲ.



ಒಂದೇ ಆಸೆ ಉಳಿದಿದೆ,



ಆ ಮೇಲೆ...ಬಿನಾಕಾ-ಎಫ್ ತನ್ನ ಅದ್ಭುತ
ಆಯುಧ ಬಿನಾಕಾ ಫ್ಲೋರೈಡ್ ಟೂಥ್‌ಪೇಸ್ಟ್‌ನ್ನು
ತೆಗೆದುಕೊಂಡು ಬರುತ್ತಾನೆ.










ಬಿನಾಕಾ-ಎಫ್ ಮತ್ತು
ಬಾಯಿಪ್ರದೇಶದ ಸೈನಿಕರು
ಒಂದುಗೂಡಿ ದಂತಭಕ್ಷಕನ
ಪಡೆಯನ್ನು ನುಚ್ಚುನೂರು
ಮಾಡುತ್ತಾರೆ.






ನೆನಪಿಡಿರಿ. ಹಳೆಯ ಅಸ್ತ್ರಗಳಷ್ಟೇ ಸಾಕಾಗುವುದಿಲ್ಲ.
ದಂತದುರ್ಗದ ರಕ್ಷಣೆಗಾಗಿ, ದಿನಕ್ಕೆರಡು ಸಲ
ಬಿನಾಕಾ ಫ್ಲೋರೈಡ್‌ನಿಂದ ಅವಶ್ಯವಾಗಿ ಅದನ್ನು
ಬ್ರಶ್ ಮಾಡಿರಿ.




ಹಲ್ಲುಗಳ ದೃಢೀಕರಣಕ್ಕೆ, ದಂತಕ್ಷಯ ನಿವಾರಣೆಗೆ—
ಬಿನಾಕಾ ಫ್ಲೋರೈಡ್

U-BF/ 6 /5 KAN



# ಅವಳಿ ಮಕ್ಕಳ ಕಥೆ

April 1975

೯

[ ಹೊಸಬರ ಮಾತುಗಳನ್ನು ನಂಬಿ ರಾಕ್ಷಸನು ಗಡ್ಡದ ಮಾಂತ್ರಿಕನನ್ನು ನೋಡಲು ಹೋದನು. ಆ ಸಂಧಿಯಲ್ಲಿ ಸಹೋದರರಿಬ್ಬರೂ ಕೊಳದ ಬಳಿಗೆ ಹೋಗಿ ಶಿಲಾಪ್ರತಿಮೆಯಾಗಿಯೂ, ಕೋತಿಯಾಗಿಯೂ ಬದಲಾವಣೆಗೊಂಡರು. ಉದಯನನೊಂದಿಗೆ ಬಂದ ಕನ್ಯೆ ರಾಕ್ಷಸನ ಶಬ್ದ ಕೇಳಿ ಉದಯನನನ್ನು ಕೊಳಕ್ಕೆ ದೂಡಿ, ತಾನೂ ಕೊಳಕ್ಕೆ ಧುಮುಕಿದಳು. ಇಬ್ಬರೂ ಹಂಸಗಳಾದರು. ]

"ಎಲ್ಲಿ ಹೋದಿರೋ ಪೋರರೇ ?" ಎಂದು ದಿಕ್ಕುಗಳು ಗಡಚಿಕ್ಕುವಂತೆ ಕೂಗುತ್ತಾ, ರಾಕ್ಷಸನು ಅಲ್ಲಿಗೆ ಬಂದನು. ಅಲ್ಲಿ ಯಾರೂ ಇಲ್ಲದಿರುವುದನ್ನು ನೋಡಿ ತುಟಿಗಳನ್ನು ಅಪ್ಪಳಿಸಿ ಹಲ್ಲು ಕಡಿಯುತ್ತ ನಾಲ್ಕು ಸುತ್ತಲೂ ತಿರುಗಿದನು. ಅವನು ಗಡ್ಡದ ಮಾಂತ್ರಿಕನನ್ನು ನೋಡಿ ಮಾತಾಡಿ ಬಂದುದರಿಂದ ಆ ಯುವಕರಿಬ್ಬರೂ ಮೋಸಗಾರರೆಂದು ಅವನಿಗೆ ಗೊತ್ತಾಗಿತ್ತು. ಅಂತೆಯೇ ಅವನು ಗಡಿಬಿಡಿಯಿಂದ ಓಡಿಬಂದಿದ್ದನು. ಅಷ್ಟರೊಳಗೆ ಅವರು ಮಾಯವಾಗಿದ್ದರು. ಅವರು ಮೋಸಗಾರರೆಂಬುದು ರಾಕ್ಷಸನಿಗೆ ಖಂಡಿತವಾಯಿತು.

ಸಹೋದರರ ಊಹನೆ ಸುಳ್ಳಾಗಿರಲಿಲ್ಲ. ಗಡ್ಡದ ಮಾಂತ್ರಿಕನಿಗೂ ಈ ರಾಕ್ಷಸನಿಗೂ ಸಂಬಂಧವಿದ್ದಿತು. ರಾಕ್ಷಸನು ಅಕಸ್ಮಾತ್ತಾಗಿ ತನ್ನ ಮನೆಗೆ ಬಂದುದನ್ನು ನೋಡಿ ಗಡ್ಡದ ಮಾಂತ್ರಿಕನಿಗೆ ಆಶ್ಚರ್ಯವಾಗಿತ್ತು. ಆ ರಾಕ್ಷಸನ ಬಾಯಿಯಿಂದ ಯುವಕರ ಸಮಾಚಾರಗಳನ್ನು ಕೇಳುತ್ತಲೇ ಅವನು ತಲೆ ಚಚ್ಚಿಕೊಳ್ಳುತ್ತ, "ಅಯ್ಯಯ್ಯೋ ! ಮೋಸವಾಯಿತಲ್ಲೋ ರಾಕ್ಷಸೋತ್ತಮಾ ! ಆ ಕಳ್ಳ ಮಕ್ಕಳನ್ನು ಕೋಟೆಯೊಳಗೆ ಬಿಟ್ಟು ಬಂದೆಯಲ್ಲಾ ? ಅವರು ನನಗೆ ಮೋಸ ಮಾಡಿ, ನನ್ನ ಹತ್ತಿರವಿದ್ದ ಮಹಿಮೆಯ ಭಸ್ಮಗಳನ್ನೆಲ್ಲ



ಕೈವಶಪಡಿಸಿಕೊಂಡು ಹೋಗಿ, ಈಗ ನಿನಗೂ ಟೋಪಿ ಹಾಕಿಬಿಟ್ಟಿದ್ದಾರೆ. ಅವರು ಸಾಮಾನ್ಯ ಪಿಂಡಗಳಂತೆ ಕಾಣುವುದಿಲ್ಲ. ಅವರ ತಂಟೆ ತೀರಿಹೋಯಿತೆಂದು ಕೊಂಡರೆ, ಅಸಲನ್ನೇ ಕೆಡಿಸಲು ಬಂದಹಾಗಿದೆ. ಅಯ್ಯಾ, ತ್ವರೆಮಾಡು, ಇನ್ನಾದರೂ ಕೈಮೀರಿ ಹೋಗಲಿಲ್ಲ. ನೀನು ಈಗಿಂದೀಗಲೇ ಕೋಟೆಗೆ ಹೋಗಿ ಅವರನ್ನು ಹಿಡಿದುಕೋ. ಅದು ಸಾಧ್ಯ ವಾಗದೆ ಹೋದರೆ ನಮ್ಮ ರಹಸ್ಯಗಳೆಲ್ಲ ಅವರಿಗೆ ಗೊತ್ತಾಗುತ್ತವೆ. ಮುಖ್ಯವಾಗಿ ನಮ್ಮ ಭವನದ ರಹಸ್ಯಗಳು ಅವರಿಗೆ ತಿಳಿದುಹೋದರೆ ನಿನಗೂ ನನಗೂ ಸಹ ಆಯುಷ್ಯ ಮುಗಿದಂತೆಯೇ. ಬೇಗ ಓಡು !" ಎಂದು ರಾಕ್ಷಸನನ್ನು ಅವಸರಪಡಿಸಿ ಹಿಂದಿರುಗಿಸಿದ್ದನು.

ಹಾಗೆ ತೇಕಿತೇಕಿ ಓಡಿಬಂದ ರಾಕ್ಷಸನು, ಅವರನ್ನು ತಾನು ನಿಲ್ಲಿಸಿದ ಸ್ಥಳದಲ್ಲಿ ಕಾಣದಿರಲು ಅವನ ಎದೆ ಬಂಡೆಕಲ್ಲು ಉರುಳುವ ಹಾಗೆ ಹೊಡೆದುಕೊಳ್ಳ ತೊಡಗಿತು. "ಎಲ್ಲಿ ಹೋದಿರೋ ಪುಂಡು ಮಕ್ಕಳೆ ಎಂದು ಕೂಗುತ್ತ, ಕೊಳದ ಹತ್ತಿರಕ್ಕೆ ಬಂದ ಅಲ್ಲಿಯೂ ಅವರ ಜಾಡುತಿಳಿಯಲಿಲ್ಲ. ಅ ಯಾದರೂ ಅಡಗಿರಬಹುದೆಂದುಕೊಂಡು ಇರುವ ತಲೆಯಷ್ಟು ಜಾಗು ಕೂಡಾ ಬಿಡದೆ ಹುಡುಕತೊ ದನು. ಸಾಯಂಕಾಲದವರೆಗೂ ಹುಡುಕಿ ನಿ ನಾದನು. ಏನೋ ಭಯ ಹತ್ತಿಕೊಂಡಿತು. ಹುದೋ ಬರುವ ಗಂಡಾಂತರವನ್ನು ಇ ನೋಡುವವನಂತೆ ನಿರಾಶೆಯಿಂದ ಮಹಾಭವ ಬಾಗಿಲನ್ನು ಸೇರಿಕೊಂಡು ತೀರಜಡನಂತೆ ತ ಕೈಯಿಟ್ಟು ಕುಕ್ಕರಿಸಿದನು.

ರಾಕ್ಷಸನು ಉಬ್ಬಸ ಬಿಡುತ್ತ ಹುಡುಕುವ ಪರಿಪಾ ಲನ್ನೆಲ್ಲಾ ಹಂಸರೂಪದಲ್ಲಿ ಕೊಳದಲ್ಲಿರುವ ಉದ ನನು ನೋಡಿಕೊಂಡೇ ಇದ್ದನು. ರಾಕ್ಷಸನು ಹು ಹುಡುಕಿ ಬೇಸತ್ತು ಭವನದ ಕಡೆಗೆ ಹೋದ ಕೂಡ ಉದಯನನು ನೀರಿನಿಂದ ಮೇಲೆ ಬಂದು ನಿಜರೂ ವನ್ನು ತಾಳಿದನು.

ಅವನ ಹಿಂದೆಯೇ ಸರೋವರ ಕನ್ಯೆ ಕೂಡಾ ಹ ರೂಪದಿಂದ ಮೇಲೆ ಬಂದು ನಿಜರೂಪದಲ್ಲಿ ನಿಂತ ಅವಳು ಉದಯನನ್ನು ನೋಡಿ, ಒಂದು ನಿಟ್ಟು ಬಿಟ್ಟು, "ಅಬ್ಬ ! ಈಗತಾನೇ ನಮಗೆ ಮಾ ಡುವ ಅವಕಾಶ ಸ್ವಲ್ಪ ಸಿಕ್ಕಿದೆ. ಪಾಪ, ನಿ ಯಾರೋ ? ಹೇಗೆ ಇಲ್ಲಿ ಬಂದು ಸಿಕ್ಕಿಬಿದ್ದಿರಿ ಗೊತ್ತಾಗಲಿಲ್ಲ. ನಿಮ್ಮ ದುರದೃಷ್ಟದಿಂದ ಎಲ್ಲಿಗೆ ಹೊರಟ ನೀವು ದಾರಿತಪ್ಪಿ ಇಲ್ಲಿಗೆ ಬಂದು ಬಿದ್ದಿರಬೇಕು !" ಎಂದಳು.

ಉದಯನನು ಆಶ್ಚರ್ಯದಿಂದ, "ಅದೇಕೆ ಹ ಹೇಳುವೆ ? ನೀನು ಮಾತ್ರ ಇಲ್ಲಿ ಸಿಕ್ಕಿಬಿದ್ದವ ವೇನು ?" ಎಂದು ಕೇಳಿದ. ಅವಳೆಂದಳು: "ನ ವಿಷಯ ಹೇಳಿ ಪ್ರಯೋಜನವಿಲ್ಲ, ತಪ್ಪಿಸಿಕೊಳ್ಳ ಮಾರ್ಗವಿಲ್ಲದ ಮೇಲೆ ಎಲ್ಲಾ ಆಶೆಗಳೂ ಇ

ಹೋಗಿದೆ. ತಪ್ಪಿಸಿಕೊಳ್ಳುವ ಆಶೆ ಇಲ್ಲವೆಂದು ಏಕೆ ಹೇಳುವೆನೆಂದರೆ, ಈ ಭವನಕ್ಕೆ ಸುತ್ತಲೂ ನಾಲ್ಕು ಕ್ರೋಶಗಳ ದೂರದವರೆಗೆ ಯಾವ ಹುಳವು ಚಲಿಸಿದರೂ ಆ ಸುಳಿವನ್ನು ಕಂಡುಹಿಡಿದು ಬಂಧಿಸಿ ತರಬಲ್ಲ ಉದ್ದನ್ನ ಗಡ್ಡದವನೊಬ್ಬನಿದ್ದಾನೆ. ಅವನನ್ನು ತಪ್ಪಿಸಿಕೊಂಡು ಬರಲು ಬ್ರಹ್ಮನಿಗೆ ಕೂಡಾ ಸಾಧ್ಯವಾಗಲ್ಲ. ನೀವು ಮಾತ್ರ ಅವನ ಕಣ್ಣುತಪ್ಪಿಸಿ ಹೇಗೆ ಬಂದಿರೋ ಆಶ್ಚರ್ಯವಾಗಿದೆ. ಹೇಗೋ ಬಂದು ಬಿಟ್ಟಿರಿ. ಇನ್ನು ಬೇಗನೇ ತಪ್ಪಿಸಿಕೊಂಡು ಹೋಗುವುದು ಒಳ್ಳೆಯದು. ಇಲ್ಲದಿದ್ದರೆ ನಿಮ್ಮ ಪ್ರಾಣಕ್ಕೆ ಅಪಾಯ ಬರುತ್ತೆ. ಈ ಭವನದ ಯಜಮಾನನಾದ ರಾಕ್ಷಸನು ಮಹಾ ದುಷ್ಟ. ಅವನನ್ನು ನೀವು ಇನ್ನೂ ನೋಡಲಿಲ್ಲವೆಂಬುದೇ ನಿಮ್ಮ ಪುಣ್ಯ. ಈಗ ಅವನು ಇಲ್ಲಿ ಇಲ್ಲವೆಂಬುದು ನಿಜವಾದರೂ, ಎಲ್ಲಿಗೆ ಹೋಗಿದ್ದಾನೆ, ಯಾವಾಗ ಬರುತ್ತಾನೆ ಎಂದು ಹೇಳಲಾಗದು. ಅಷ್ಟರೊಳಗೆ ನಿಮ್ಮ ಸಹೋದರರಿಗೆ ನಿಜರೂಪ ಬರುವಂಥ ಉಪಾಯ ನಾನು ಹೇಳುತ್ತೇನೆ. ಅದರಂತೆ ಮಾಡಿ ಬೇಗನೇ ತಪ್ಪಿಸಿಕೊಂಡು ನಿಮ್ಮ ದಾರಿ ನೋಡಿಕೊಂಡು ಹೋಗಿಬಿಡಿ."

ಅವಳ ಮಾತನ್ನು ಸುಮ್ಮನೆ ಕೇಳಿ ಉದಯನನು ಮುಗುಳು ನಗುತ್ತ, "ನಾವು ದಾರಿ ತಪ್ಪಿ ಇಲ್ಲಿಗೆ ಬಂದವರೇನೂ ಅಲ್ಲ. ಕಳೆದು ಹೋದುದನ್ನು ಹುಡುಕಲು ಎಲ್ಲಾ ಕಡೆಗೂ ಹೋಗುವಂತೆ ಇಲ್ಲಿಗೂ ಬಂದಿದ್ದೇವೆ. ಈ ಭವನದ ರಹಸ್ಯವನ್ನು ತಿಳಿಯುವವರೆಗೂ ಇಲ್ಲೇ ಇರಬೇಕೆಂತಲೂ ಇದ್ದೇವೆ. ಪ್ರಾಣದ ಆಶೆಯಿಂದ ಮುಂದಿಟ್ಟ ಹೆಜ್ಜೆಯನ್ನು ಹಿಂದಿಡುವವರಲ್ಲ. ಆದುದರಿಂದ ನಮ್ಮನ್ನು ಕುರಿತು ನೀನು ಚಿಂತೆಪಡುವುದು ಬೇಡ. ಇಲ್ಲಿಯ ಯಜಮಾನನಾದ ರಾಕ್ಷಸನನ್ನು ಕುರಿತು ನಿನಗೆ ಗೊತ್ತಿರುವ ವಿಷಯವನ್ನು ನಮಗೆ ಹೇಳಿದರೆ ಸಾಕು. ಅದಿರಲಿ, ಎಲ್ಲಿಯವಳೋ ಇಲ್ಲಿಬಂದು ಸಿಕ್ಕಿ ನಿರಾಶಳಾಗಿರುವ



ನೀನು, ಯಾರು ಎಲ್ಲಿಯವಳೆಂಬ ಸಂಗತಿ ಹೇಳಲೇ ಇಲ್ಲವಲ್ಲ ? ಅದನ್ನು ಹೇಳಲಿಕ್ಕೆ ಅಭ್ಯಂತರವಿಲ್ಲದಿದ್ದರೆ, ಕೇಳಿ ತೃಪ್ತನಾಗುತ್ತೇನೆ" ಎಂದನು.

ಅವನ ಮಾತಿಗೆ ಆ ಕನ್ಯೆ, "ಹೇಳಲು ಅಭ್ಯಂತರವೇನಿಲ್ಲ. ಅದನ್ನು ತಿಳಿದುಕೊಂಡು ನಿಮಗಾಗುವ ಪ್ರಯೋಜನವೂ ಇಲ್ಲ. ನಿಮ್ಮ ತೃಪ್ತಿಗಾಗಿ ಹೇಳುತ್ತೇನೆ." ಎಂದು ಹೇಳಿ, ಕೊಳದೊಳಗೆ ಹೋಗಿ, ಸ್ವಲ್ಪಹೊತ್ತಿಗೆ ಇನ್ನೆರಡು ಹಂಸಗಳೊಂದಿಗೆ ಮೇಲೆ ಬಂದಳು. ಮೇಲೆ ಬಂದಕೂಡಲೇ ಆ ಎರಡು ಹಂಸಗಳೂ ಸುಂದರ ಕನ್ಯೆಯರಾಗಿ ನಿಂತರು.

ಉದಯನನು ಮೂವರು ಕನ್ಯೆಯರನ್ನೂ ನೋಡಿದ. ಮೂವರೂ ಒಂದೇ ಅಚ್ಚಿನಲ್ಲಿ ಹೊಯಿದ ಹಾಗಿರುವುದನ್ನು ನೋಡಿ ಆಶ್ಚರ್ಯದಿಂದ, "ನೀವು ಅವಳಿಜವಳಿ ಕನ್ಯೆಯರಾಗಿರುವಿರಲ್ಲ ? " ಎಂದನು.

"ಹೌದು" ಎಂದು ಮೂವರೂ ಒಂದೇಸಾರಿ ಉತ್ತರ ಕೊಟ್ಟರು. ಅದರಿಂದ ಉದಯನನ



ಹೃದಯವು ಉತ್ಸಾಹದಿಂದ ಉಬ್ಬಿತು, "ಹಾಗಾದರೆ ನಾವು ಇಷ್ಟುದಿನ ಯಾವ ಕನ್ಯೆಯರನ್ನು ಹುಡುಕುತ್ತ ಹೊರಟಿದ್ದೇವೋ ಆ ಕನ್ಯೆಯರೇ ನೀವೇನು ? ಹೇಳಿ ಹೇಳಿ. ನೀವು ದಾನಶೀಲ ಮಹಾರಾಜನ ಕುಮಾರಿಯರುತಾನೆ ? " ಎಂದು ಕೇಳಿದ.

ಅವನ ಪ್ರಶ್ನೆಗೆ ಆ ಕನ್ಯೆಯರು ಹೊಂದಿದ ಆಶ್ಚರ್ಯವು ಅಷ್ಟಿಷ್ಟಲ್ಲ, "ಹೌದು. ಅದೆಲ್ಲ ನಿಮಗೆ ಹೇಗೆ ಗೊತ್ತಾಯಿತು ? ನಾವು ನಿಮ್ಮನ್ನು ನೋಡೇ ಇಲ್ಲವಲ್ಲ ? " ಎಂದರು ಕನ್ಯೆಯರು.

"ಹೇಗೆ ತಿಳಿಯುವುದೆಂದರೇನು ? ಇಡಿಯ ದೇಶವೇ ದುಃಖದಲ್ಲಿರುವಾಗ ? ನಿಮ್ಮ ಎಲ್ಲಾ ಸಮಾಚಾರವೂ ನಮಗೆ ಗೊತ್ತು. ನಿಮ್ಮನ್ನು ಹುಡುಕಿ ಹಿಡಿಯಲಿಕ್ಕೇ ನಾವು ನಿಮ್ಮ ತಂದೆಯ ಆಶೀರ್ವಾದ ಪಡೆದು ಹೊರಟಿದ್ದೇವೆ. ಅಂದ ಹಾಗೆ ನಿಮ್ಮ ಹೆಸರು ? " ಎಂದ ಉದಯನ.

"ಸುಹಾಸಿನಿ. ನಮ್ಮ ಎಲ್ಲಾ ಸಮಾಚಾರ ನಿಮಗೆ ಗೊತ್ತಿದ್ದರೆ, ಉಳಿದಿಬ್ಬರ ಹೆಸರು ಕೂಡಾ ನಿಮ ಗೊತ್ತಿರಲೇ ಬೇಕಲ್ಲ ? " ಎಂದಳು.

"ಗೊತ್ತಿಲ್ಲದೇನು ? ಇಷ್ಟು ಬೇಗದಲ್ಲಿ ಇ ಸುಲಭವಾಗಿ ನಿಮ್ಮನ್ನು ನೋಡಬಲ್ಲೆವೆಂದು ನಾ ಕನಸಿನಲ್ಲಿಯೂ ಎಣಿಸಿದವರಲ್ಲ. ಈ ಒಳ್ಳೆಯ ಸು ನನ್ನ ಸೋದರರಿಗೂ ತಿಳಿದರೆ ಎಷ್ಟು ಒಳ್ಳೆ ದಿತ್ತು ! ಅವರ ಗತಿ ಏನೋ ? " ಎಂದು ಉ ಯನನು ತನ್ನ ಸೋದರರು ಮಾನವ ರೂಪದಲ್ಲಿ ದುದಕ್ಕೆ ಚಿಂತೆಯನ್ನು ವ್ಯಕ್ತಪಡಿಸಿದನು.

ಅವನ ಚಿಂತೆಯನ್ನು ನೋಡಿ ಸುಹಾಸಿ "ಚಿಂತಿಸಬೇಡಿ" ಎಂದು ಹೇಳಿ ಕೊಳಕ್ಕಿಳಿದು, ಸ್ವ ಹೊತ್ತಿಗೆ ಕೋತಿ ರೂಪದಲ್ಲಿರುವ ನಿಶಿ ನೊಂದಿಗೂ, ಶಿಲಾಪ್ರತಿಮೆಯ ರೂಪದಲ್ಲಿರು ಸಂಧ್ಯನೊಂದಿಗೂ ಮೇಲೆ ಬಂದಳು. ಆಮೇ ಉದಯನನನ್ನು ಕರೆದುಕೊಂಡು, ಆ ತೋಟ ಮಾವಿನ ಮರದಬಳಿಗೆ ಹೋದಳು.

ಆ ಮಾವಿನ ಮರದ ಬುಡದಲ್ಲಿ ಕೆಲವು ನಾಯಿ ಕೊಡೆಗಳು ಬೆಳೆದಿದ್ದುವು. ಅವುಗಳಲ್ಲಿ ಕೆಲವ ಹರಿದುಕೊಳ್ಳಲು ಉದಯನನಿಗೆ ಹೇಳಿದಳು. ಅವ ಕೊಯಿದುಕೊಂಡ ಮೇಲೆ ಮತ್ತೆ ಸ್ವಲ್ಪ ದೂ ಕರೆದೊಯ್ದಳು.

ಅಲ್ಲಿ ಒಂದು ರಾಕ್ಷಸನ ವಿಗ್ರಹವಿದ್ದಿತು. ವಿಗ್ರಹದ ಬಾಯಿಯೊಳಗಿನಿಂದ ನೀರು ಸು ಯುತ್ತಿದ್ದಿತು. ಅವಳು ಒಂದು ಎಲೆಯಿಂದ ದೊ ಮಾಡಿ ಉದಯನನಿಗೆ ಕೊಟ್ಟು, ರಾಕ್ಷಸನ ಬಾಯಿ ನೀರನ್ನು ಸ್ವಲ್ಪ ಅದರಲ್ಲಿ ಹಿಡಿಯಲು ಹೇಳಿದಳ ಉದಯನನು ದೊನ್ನೆ ತುಂಬಾ ಆ ನೀರನ್ನು ಹಿಡಿ ಕೊಂಡನು. ಆಮೇಲೆ ಅವರಿಬ್ಬರೂ ಮ ಕೊಳದಬಳಿಗೆ ತಿರುಗಿ ಬಂದರು.

ಸುಹಾಸಿನಿ ಉದಯನನಿಗೆ ಆ ನಾಯಿ ಕೊ ಗಳನ್ನು ಕೋತಿಗೆ ತಿನ್ನಿಸಲು ಹೇಳಿದಳು. ಉದ

ಹಾಗೆ ಮಾಡಿದ ಕೂಡಲೇ ನಿಶೀಥನು ಕೋತಿ ...ಪ ಕಳೆದು, ನಿಜರೂಪದಲ್ಲಿ ಪ್ರತ್ಯಕ್ಷನಾದನು. ...ಯು ದೊನ್ನೆಯಲ್ಲಿದ್ದ ನೀರನ್ನು ಶಿಲಾ ...ಮೆಗೆ ಚಿಮುಕಿಸಲು ಹೇಳಿದಳು. ಹಾಗೆ ಮಾಡಿದ ಕೂಡಲೇ ಸಂಧ್ಯಾನು ನಿಜರೂಪದಲ್ಲಿ ಕಾಣಿಸಿದನು.

ಉದಯನನು ಆ ಕನ್ಯೆಯರನ್ನು ತನ್ನ ಸಹೋದರರಿಗೆ ತೋರಿಸುತ್ತ, "ವಿಚಿತ್ರವನ್ನು ನೋಡಿದಿರಾ? ನಾವು ಯಾರನ್ನು ಹುಡುಕಿಕೊಂಡು ಹೊರಟಿದ್ದೇವೋ ಆ ತ್ರಿವಳಿ ರಾಜಕುಮಾರಿಯರೇ ಇವರು. ಆದ್ದರಿಂದ ನಾವು ಬಂದ ಕಾರ್ಯ ತೀರಿ ಹೋದಂತೆಯೇ ...ಸಿ. ಇನ್ನು ಇವರನ್ನು ಕರೆದುಕೊಂಡು ಈ ಭವನದಿಂದ ಹೊರಗೆ ಹೋಗುವ ಉಪಾಯ ಹುಡುಕಬೇಕು." ಎಂದ ಸಂತೋಷದಿಂದ.

ಅವನ ಸಂತೋಷಕ್ಕೆ ನೀರು ಚಿಮುಕಿಸುವವಳಂತೆ ಸುಹಾಸಿನಿಯೆಂದಳು. "ಅದು ಅಷ್ಟೇನೂ ಸುಲಭವಾದ ಕೆಲಸವಲ್ಲ. ನಮ್ಮನ್ನು ಕಾಪಾಡುವ ಮಾತು ಹಾಗಿರಲಿ, ಮೊದಲು ನಿಮ್ಮ ಪ್ರಾಣ ಕಾಪಾಡಿಕೊಂಡು ನೀವಿಲ್ಲಿಂದ ಹೊರಬೀಳಲು ಸಾಧ್ಯವಾದರೆ ದೊಡ್ಡ..." ಅವಳ ಮಾತು ಪೂರ್ತಿಯಾಗುವುದರೊಳಗೇ ರೊಂಯ್ಯನೆ ಸುಳಿಗಾಳಿಯೊಂದು ಬಂದಿತು.

ಅದನ್ನು ನೋಡಿ ಸುಹಾಸಿನಿ ಗಾಬರಿಯಿಂದ ತನ್ನ ಮಾತನ್ನು ಅಲ್ಲಿಗೇ ನಿಲ್ಲಿಸಿ, "ಅದೊದೋ! ಅವನು ಬರುತ್ತಿದ್ದಾನೆ. ಅದಕ್ಕೇ ಈ ಸುಳಿಗಾಳಿಯ ಸೂಚನೆ. ಈಗ ನಾವು ಈ ಕೊಳದೊಳಗೆ ಹೋಗುತ್ತೇವೆ. ನಿಮ್ಮ ಗತಿ? ಅಯ್ಯೋ! ದೇವರೆ! ನೀವು ಕೊಳದಲ್ಲಿ ಹಂಸಗಳಾದರೂ ಸಿಕ್ಕಿಬೀಳುವಿರಿ. ಅದು ಸಾಧ್ಯವಿಲ್ಲ. ನಿಮ್ಮನ್ನು ನೀವೇ ಕಾಪಾಡಿಕೊಳ್ಳಿರಪ್ಪಾ! ಜಾಗ್ರತೆ!" ಎಂದು ಹೇಳುತ್ತಾ ತನ್ನ ತಂಗಿಯರೊಂದಿಗೆ ಕೊಳದಲ್ಲಿ ಧುಮುಕಿಬಿಟ್ಟಳು.

ಅದೇ ಸಮಯದಲ್ಲಿ ಉದಯನನು ತನ್ನಬಳಿಯಲ್ಲಿರುವ ಬಿಳಿಯ ಭಸ್ಮವನ್ನು ತನ್ನ ಮೇಲೆಯೂ ಸಹೋದರರ ಮೇಲೆಯೂ ಚೆಲ್ಲಿದನು. ಕೂಡಲೇ ಮೂವರೂ ಮಾಯವಾಗಿ ಹೋದರು. ಮತ್ತೆ





ಸ್ವಲ್ಪ ಹೊತ್ತಿನಲ್ಲಿ ಸುಳಿಗಾಳಿ ತಗ್ಗಿ ಆಕಾಶವನ್ನೇ ಮರೆಯಿಸುವಂತಹ ದೊಡ್ಡದೊಂದು ರಣಹದ್ದು ಕೊಳದ ಬದಿಗೆ ಏರುಗುತ್ತಾ, ಬ್ರಹ್ಮಾಂಡದಂತಹ ಭಯಂಕರವಾದ ರಾಕ್ಷಸನಾಗಿ ನೆಲದಲ್ಲಿ ನಿಂತಿತು.

ಆ ರಾಕ್ಷಸನನ್ನು ನೋಡಿದ ಕೂಡಲೇ ಕೊಳದಲ್ಲಿರುವ ಹಂಸಗಳೆಲ್ಲವೂ ರಪರಪನೆ ರೆಕ್ಕೆಗಳನ್ನು ಬಡಿಯುತ್ತಾ ಅವನಿಂದ ಎಳೆಯಲ್ಪಡುವ ಹಾಗೆ ಕೊಳದ ತೀರಕ್ಕೆ ಬಂದು ನೀರಿನಲ್ಲಿ ಸಾಲಾಗಿ ಹತ್ತಿರ ಹತ್ತಿರ ನಿಂತುವು. ರಾಕ್ಷಸನು ಕೆಲವು ಕ್ಷಣಗಳವರೆಗೆ ಅವುಗಳನ್ನು ಪರೀಕ್ಷಿಸಿ ನೋಡಿ, ಎಣಿಕೆ ಹಾಕಿ ಮುಗಿಸಿ, ಕೂಡಲೇ ಹದ್ದಿನ ರೂಪತಾಳಿ ಆಕಾಶ ಮಾರ್ಗದಲ್ಲಿ ಹಾರಿಹೋದನು.

ಇಷ್ಟಾಗುವಾಗ ಚೆನ್ನಾಗಿ ಕತ್ತಲೆ ಕವಿದುಬಿಟ್ಟಿತ್ತು. ಉದಯನನು ತನ್ನ ಹತ್ತಿರವಿದ್ದ ಭಸ್ಮದ ಸಹಾಯದಿಂದ ತನಗೂ ಸೋದರರಿಗೂ ನಿಜರೂಪ ಬರುವಂತೆ ಮಾಡಿಕೊಂಡನು. ಆ ಹೊತ್ತಿಗೆ ಅವರು ಹೊಟ್ಟೆಗೆ ಆಹಾರ ತಿಂದು ಮೂರುದಿನಗಳಾಗಿದ್ದುವು. ಹಸಿ-ಯಿಂದ ಮೂವರಿಗೂ ಹೊಟ್ಟೆಗಳು ಜೋರಾ- ಚುರುಗುಟ್ಟುತ್ತಿರಲು, ಮಹಿಮೆಯ ಕರವಸ್ತ್ರ- ಸಹಾಯದಿಂದ ಬೇಕಾದ ಹಣ್ಣುಗಳನ್ನು ಬರಿ-ಕೊಂಡು ಮೂವರೂ ತಿಂದು ತಮ್ಮ ಹೊಟ್ಟೆಯನ್ನು ಶಾಂತಪಡಿಸಿಕೊಂಡರು. ಆಮೇಲೆ ಸೋದ- ಕನ್ಯೆಯರು ಮೇಲೆ ಬರುವರೇನೋ ಎಂದು ಸ್ವಲ್ಪ ಹೊತ್ತು ನೋಡಿದರು. ಎಷ್ಟು ಹೊತ್ತಾದರೂ ಅವರು ಬರುವ ಸೂಚನೆ ಕಾಣಲಿಲ್ಲ. ಇನ್ನು ಆ ಸ್ಥ-ದಲ್ಲಿಯೇ ರಾತ್ರಿಯನ್ನು ಕಳೆಯಬೇಕೆಂದು ನಿಶ್ಚಯಿಸಿ ಈ ರೂಪವು ತಮ್ಮನ್ನು ಸಿಕ್ಕಿಸಿ ಹಾಕಬಹುದೆಂ- ಸಂದೇಹದಿಂದ, ಅದೃಶ್ಯ ರೂಪವನ್ನು ಪಡೆದ- ನಿರ್ಭಯದಿಂದ ಅಲ್ಲೇ ಉಳಿದರು.

ಬೆಳಗಾಯಿತು, ನೋಡ ನೋಡುತ್ತಿರಲು ಕೊ-ದಿಂದ ಮೂರು ಹಂಸಗಳು ಮೇಲೆ ಬಂದು ಮೂವರು ಕನ್ಯಾಮಣಿಗಳಾಗಿ ಪ್ರತ್ಯಕ್ಷರಾದರು. ಕೂಡಲೇ ಮೂವರು ಸಹೋದರರೂ ಪ್ರತ್ಯ- ರೂಪ ತಾಳಿದರು. ಉದಯನನು ಸುಹಾಸಿನಿಯನ್ನು ಕುರಿತು, "ನಿನ್ನೆ ಬಂದ ಆ ಹದ್ದು ರೂಪದ ರಾಕ್ಷಸನ- ದೊಡ್ಡ ಯಜಮಾನನಾಗಿರಬೇಕು. ಅವನು ಎಲ್ಲಿ- ಹೋದ? ಇನ್ನು ಯಾವಾಗ ಬರುತ್ತಾನೆ?" ಎಂದು ಪ್ರಶ್ನೆ ಮಾಡಿದ.

"ಮತ್ತೆಲ್ಲಿಗೆ ಹೋದಾನು? ಬೇಟೆಯನ್ನು ಹುಡುಕಲಿಕ್ಕೆ ಹೋಗಿರುತ್ತಾನೆ. ತನ್ನ ಹೊಟ್ಟೆಯ- ಬೇಟೆಗೆ ಅಲ್ಲ; ಅವಳಿಜವಳಿ ಮನುಷ್ಯರ ಬೇಟೆಗೆ" ಎಂದಳು ಸುಹಾಸಿನಿ.

"ಅದೇಕೆ ಅವಳಿಜವಳಿಗಳ ಬೇಟೆ?" ಎಂದು ಆಶ್ಚರ್ಯದಿಂದ ಉದಯನನು ಕೇಳಲು, ಸುಹಾಸಿ- ರಾಕ್ಷಸನ ರಹಸ್ಯ ವಿಷಯವನ್ನು ಹೇಳತೊಡಗಿದಳು.

"ಅದೊಂದು ವಿಚಿತ್ರವೂ ಭಯಂಕರವೂ ಆ- ರಹಸ್ಯ. ಈ ರಾಕ್ಷಸನು ಒಂದು ದೇವಿಯನ್ನು

ಆರಾಧನೆ ಮಾಡುತ್ತಾನೆ. ಆ ದೇವಿ ಇವನಿಗೆ ಅರ್ಧ ಒಲಿದಿದ್ದಾಳಂತೆ. ಆ ಮಹಿಮೆಯಿಂದಲೇ ಈ ಮಾಯಾ ಭವನವನ್ನು ನಿರ್ಮಿಸಿ ತಾನೂ ಮಾಯಾ ವೇಷ ಧರಿಸುತ್ತಾನೆ. ಇನ್ನು ಅವಳ ಪೂರ್ಣ ಅನುಗ್ರಹವನ್ನು ಪಡೆಯಲು ಆ ದೇವಿಗೆ ಐವತ್ತು ಮಂದಿ ಅವಳಿಜವಳಿಗಳನ್ನು ಬಲಿಕೊಡಬೇಕಂತೆ. ಆ ಬಲಿ ಒಂದು ಪೂರ್ತಿಯಾಗಿಬಿಟ್ಟರೆ ದೇವಿ ಅವನಿಗೆ ಸಂಪೂರ್ಣವಶಳಾಗಿ, ಎಲ್ಲಾ ಮಹಿಮೆಗಳನ್ನೂ ಪ್ರಸಾದಿಸಿ, ಅವನಿಗೆ ಮರಣವೇ ಇಲ್ಲದಂತೆ ಮಾಡಿ ಬಿಡುತ್ತಾಳೆ. ಈಗ ನಲುವತ್ತೇಳು ಮಂದಿ ಅವಳಿ ಜವಳಿಗಳು ಸಿಕ್ಕಿದ್ದಾರೆ. ಉಳಿದವರಿಗಾಗಿ ಹುಡುಕಿ ಕೊಂಡಿದ್ದಾನೆ. ಯಾವಾಗ ಸಿಗುವರು, ಎಲ್ಲಿ ಸಿಗುವರು, ಯಾವಾಗ ಬಲಿ ಪೂರ್ತಿಯಾಗಿ ತಾನು ದೇವಿಯ ಪೂರ್ಣಾನುಗ್ರಹಕ್ಕೆ ಪಾತ್ರನಾಗುವೆನೋ ಎಂದು ಒಂದು ಕ್ಷಣವೂ ಸ್ತಿಮಿತವಿಲ್ಲದೆ ಯಾವಾಗಲೂ ಹಕ್ಕಿಯ ರೂಪದಲ್ಲಿ ಪ್ರಪಂಚ ಪ್ರದಕ್ಷಿಣೆ ಮಾಡುತ್ತಾ ಇರುತ್ತಾನೆ. ನಾವು ಕೂಡಾ ನಮ್ಮ ಅಂತ್ಯಕ್ಷಣಗಳನ್ನು ಎಣಿಸಿಕೊಂಡಿದ್ದೇವೆ."

ಮೂವರು ಸಹೋದರರೂ ಅವಳು ಹೇಳುವ ಮಾತುಗಳನ್ನು ಆಸ್ಥೆಯಿಂದ ಕೇಳಿ, ಒಬ್ಬರನ್ನೊಬ್ಬರು ನೋಡಿ ತಲೆಯಾಡಿಸಿಕೊಂಡರು. "ಆಹಾ! ದೇವಿಯ ದಯೆ! ನಮ್ಮ ಅದೃಷ್ಟದ ಮೇಲಿದೆ! ನಾವು ಮೂವರೂ ಆ ಮಾಯಾವಿಯ ಹದ್ದಿನ ಕೈಗೆ ಬಿದ್ದಿರುತ್ತಿದ್ದರೆ ಈ ದಿನಕ್ಕೆ ಅವನ ಬೇಟೆ ಪೂರ್ತಿಯಾಗುತ್ತಿತ್ತು. ಬಲಿಯೂ ನೆರವೇರಿ ಬಿಡುತ್ತಿತ್ತು!" ಎಂದ ಉದಯನ.

"ಅದು ಹೇಗೆ? ನೀವು ಮೂವರೂ ಅವಳಿ ಜವಳಿಗಳೇನಾ? ಅರೆ! ಹೌದಲ್ಲ! ಮೂವರೂ ಒಂದೇ ರೂಪದವರಾಗಿರುವಿರಿ!" ಎಂದರು ಎಲ್ಲರೂ ಕನ್ಯೆಯರು ಒಂದೇ ಬಾಯಿಗೆ.

"ಹೌದು. ಅವನಿಗೆ ಬೇಕಾದ ಮೂವರೂ,



ನಿಮ್ಮನ್ನು ರಕ್ಷಿಸಲು ಬಂದವರೂ ನಾವೇ ಆದೆವಲ್ಲ! ಇದೇ ವಿಚಿತ್ರ! ಆಶ್ಚರ್ಯ! ದೇವಿಯ ದಯೆ! ಅದೃಷ್ಟ!" ಎಂದ ಉದಯನ.

"ಹಾಗಾದರೆ ನೀವು ಇನ್ನಷ್ಟು ಜಾಗ್ರತೆಯಾಗಿರಬೇಕಾಯಿತು. ಏನು ಮಾಡುವಿರೋ?" ಎಂದು ಎಚ್ಚರಿಕೆ ಕೊಟ್ಟಳು ಸುಹಾಸಿನಿ.

"ನಿಜವೇ. ಈ ಭಯಂಕರ ರಹಸ್ಯ ಈಗತಾನೇ ನಮಗೆ ಗೊತ್ತಾಯಿತು. ಆಗಲಿ. ಇನ್ನುಮುಂದೆ ಇರಬೇಕಾದಷ್ಟು ಎಚ್ಚರಿಕೆಯಲ್ಲೇ ಇರುತ್ತೇವೆ. ಏನಾದರೂ ಈಗ ಇಲ್ಲಿಂದ ಪಾರಾಗುವ ಮಾರ್ಗ ಹುಡುಕಬೇಕಾದುದು ಮುಖ್ಯ. ಈ ಪ್ರದೇಶವೆಲ್ಲವೂ ಭಯಂಕರವಾದ ಮಾಯಾಜಾಲದಿಂದ ತುಂಬಿ ಹೋಗಿದೆ. ಆದುದರಿಂದ ಇಲ್ಲಿಂದ ಪಾರಾಗಲಿಕ್ಕೆ ಅಡ್ಡಿಯಾಗುವಂತಹ ಕಷ್ಟಗಳು ಏನೇನಿರಬಹುದೆಂಬುದು ಗೊತ್ತಾದರೆ ಒಳ್ಳೆಯದಿತ್ತು. ನಿಮಗೆ ಗೊತ್ತಿದ್ದರೆ ಹೇಳಿರಿ. ಅದಕ್ಕೆ ತಕ್ಕ ಉಪಾಯವನ್ನು ಆಲೋಚನೆ

ಮಾಡುತ್ತೇವೆ" ಎಂದ ಉದಯನ. "ಮುಖ್ಯವಾದ ಕಷ್ಟವೇನೆಂದರೆ, ನಾವು ಕಷ್ಟಪಟ್ಟು ತಪ್ಪಿಸಿಕೊಂಡೆವೆಂದರೆ, ಮತ್ತೆ ಆ ರಾಕ್ಷಸನ ಕಣ್ಣಿಗೆ ಸಿಕ್ಕಿಬೀಳುವುದಂತೂ ಖಂಡಿತ. ಆದುದರಿಂದ ಎಲ್ಲಕ್ಕೂ ಮುಖ್ಯವಾದ ಕಷ್ಟ ಒಂದೇ ಇದೆ. ನೀವು ಆ ರಾಕ್ಷಸನ ಕಣ್ಣಿಗೆ ಕಾಣದಂತೆ ಅವನು ವಾಸಮಾಡುವ ಭೂಗೃಹದೊಳಗೆ ಪ್ರವೇಶಿಸಲೇ ಬೇಕಾಗುತ್ತೆ. ಅದು ಹೇಗೆ ಸಾಧ್ಯವೋ ?" ಎಂದಳು ಸುಹಾಸಿನಿ,

ಅದಕ್ಕೆ ಉದಯನ ಬಹಳ ಸುಲಭವಾಗಿ, "ಅದಕ್ಕೇಕೆ ಅಷ್ಟು ಆಲೋಚನೆ ? ನಮ್ಮ ಹತ್ತಿರವಿರುವ ಮಾಯದ ಭಸ್ಮಗಳಿಂದ ನಾವು ಹೇಗೆ ಅದೃಶ್ಯ ರೂಪಿಗಳಾಗುವೆವೆಂದು ನೀವು ನೋಡಿರುವಿರಷ್ಟೆ ? ಆ ಚಿಂತೆ ಬಿಡಿ" ಎಂದ ಉತ್ಸಾಹದಿಂದ.

ಸುಹಾಸಿನಿ ಅವನ ಉತ್ಸಾಹಕ್ಕೆ ತಣ್ಣೀರೆರಚುವವಳಂತೆ, "ಅಯ್ಯೋ ಪಾಪ ! ಅದು ನಮಗೂ ಗೊತ್ತಿದೆ. ಮಹಾ ದೊಡ್ಡ ಉಪಾಯ ಅಂತ ಮಾಡಿದ್ದೀರಿ. ಆ ಭಸ್ಮಗಳ ವಿಷಯ ಒಂದು ನೆನಪಿಟ್ಟುಕೊಳ್ಳಿ, ನಿಮ್ಮ ಭಸ್ಮಗಳೂ ಅಂಜನಗಳೂ ಆ ರಾಕ್ಷಸನ ಭೂಗೃಹದಲ್ಲಿ ಏನೂ ಪ್ರಭಾವ ಬೀರಲಾರವು, ಅವುಗಳ ಮಹಿಮೆಗಳೆಲ್ಲಾ ಇಂತಹ ಹೊರಗಿನ ಪ್ರದೇಶದಲ್ಲಿಯೇ ಸರಿ. ಆದುದರಿಂದ ಅವುಗಳನ್ನು ನಂಬಬೇಡಿ" ಎಂದಳು.

ಈ ಮಾತು ಕೇಳಿದ ಕೂಡಲೇ ಮೂವ
ಸಹೋದರರ ಮುಖಗಳೂ ಬಾಡಿಹೋದುವು. ಅ
ಧೈರ್ಯವು ಜಾರಿಹೋಯಿತು. ಚಿಂತೆಯಿಂದ ಒ
ರನ್ನೊಬ್ಬರು ನೋಡಿದರು. ಅವರ ಕಂದಿದ ಮು
ವನ್ನು ನೋಡಿ ಸುಹಾಸಿನಿ, "ಹಾಗಂತ ಹೆದರು
ರೇನು ? ಧೈರ್ಯ ಬಿಡಬೇಡಿ. ಬುದ್ಧಿ ಬಲವ
ಉಪಯೋಗಿಸಿದರೆ ಏನಾದರೂ ಆಲೋಚ
ಹೊಳೆಯದೇ ಹೋಗದು. ಆಪತ್ತಿನಲ್ಲಿ ಧೈರ್ಯ
ವನ್ನು ಬಿಡಬಾರದೆಂದು ಪಾಠದಲ್ಲಿ ನಾವು ಓದಿದ್ದೇ
ಅಂತಹ ಧೈರ್ಯದಿಂದಲೇ ನಾವೆಲ್ಲಾ ಬದ
ಕೊಂಡಿದ್ದೇವೆ ಗೊತ್ತಾ ?" ಎಂದಳು.

ಅವಳ ಧೈರ್ಯದ ಮಾತಿಗೆ ಆಶ್ಚರ್ಯಪಡುತ
ಉದಯನನು, "ನಿಜವೇ. ಆಲೋಚನೆ ಮಾಡ
ಕ್ಕಾದರೂ ವ್ಯವಧಿ ಬೇಕಲ್ಲವೆ ? ಯಾವ ಕ್ಷ
ದಲ್ಲಿಯೂ ರಾಕ್ಷಸನ ಸುಳಿಗಾಳಿ ಸುಳಿಯಬಹುದಾ
ಸ್ಥಳವಿದು" ಎಂದ ಉದಯನ.

"ಅದಕ್ಕಾಗಿ ಹೆದರಬೇಡಿ. ದುಷ್ಟದಮನಕ್ಕಾ
ಬಂದ ನಿಮಗೆ ದೇವರ ಸಹಾಯವಿರುತ್ತದೆ. ದೇವ
ದಯದ ಬೆಂಬಲವನ್ನು ನಂಬಿ. ನಿಧಾನವಾ
ಆಲೋಚನೆ ಮಾಡಿರಿ. ಖಂಡಿತಾ ಉಪಾಯ ಹೊ
ಯುತ್ತದೆ" ಎಂದಳು ಸುಹಾಸಿನಿ.

—(ಇನ್ನೂ ಇದ






# ವೀರಹನುಮಾನ್

ವಾಲಿ ರಾಮಬಾಣದಿಂದ ಪ್ರಾಣಾಂತಿಕ ಸ್ಥಿತಿಯಲ್ಲಿ ಬಿದ್ದಿದ್ದಾನೆಯೇ ಹೊರತು, ಸಾಯಲಿಲ್ಲ. ಸ್ಮೃತಿಯೂ ಅವನ ಮಸ್ತಿಷ್ಕದಲ್ಲಿ ಆಡುತ್ತಿತ್ತು. ಮೆಲ್ಲನೆ ಕಣ್ಣುಗಳನ್ನು ತೆರೆದು ಅತ್ತ ಇತ್ತ ನೋಡುತ್ತಿದ್ದ. ತನ್ನ ಮಗ ಅಂಗದನನ್ನು ನೋಡುತ್ತಾ, ಅವನ ಬಳಿಯಲ್ಲಿ ನಿಂತಿರುವ ಸುಗ್ರೀವನನ್ನೂ ನೋಡಿದ. ಅವನ ತುಟಿಗಳು ಕದಲತೊಡಗಿ ಸುಗ್ರೀವನನ್ನು ಕುರಿತು ಹೀಗೆ ಹೇಳತೊಡಗಿದ:

"ಸುಗ್ರೀವಾ, ನಿನ್ನನ್ನು ರಾಜ್ಯದಿಂದ ಓಡಿಸಿ, ನಿನ್ನ ಹೆಂಡತಿಯನ್ನು ವಶಮಾಡಿಕೊಂಡೆನೆಂದು ನನ್ನ ಹಗೆಯಿಟ್ಟುಕೊಳ್ಳಬೇಡಪ್ಪಾ. ನಾವಿಬ್ಬರೂ ನಮ್ಮ ಸುಖವನ್ನು ಹಂಚಿಕೊಂಡು ಸೋದರ ಸ್ನೇಹದಿಂದ ಬದುಕಲು ಹಣೆಯಲ್ಲಿ ಬರೆದಿಲ್ಲ. ಆದ್ದರಿಂದಲೇ ನನ್ನ ಬುದ್ಧಿ ಹಾಗೆ ಹೋಯಿತು. ನಾನು ಸತ್ತುಹೋಗುತ್ತಿದ್ದೇನೆ. ಇನ್ನು ಮೇಲೆ ನೀನೇ ವಾನರರಿಗೆಲ್ಲ ರಾಜನಾಗಿರು; ನನ್ನದೊಂದು ಕೊನೆಯ ಕೋರಿಕೆಯನ್ನು ಹೇಳುತ್ತೇನೆ. ಅದು ಎಷ್ಟು ಕಷ್ಟವಾಗಿದ್ದರೂ ನೆರವೇರಿಸದೆ ಬಿಡಬೇಡ. ನನಗೆ ನನ್ನ ಪ್ರಾಣಕ್ಕಿಂತಲೂ ಪ್ರಿಯನಾದವನು ಅಂಗದಕುಮಾರ. ಅವನನ್ನು ನಿನ್ನ ಮಗನಂತೆಯೇ ನೋಡಿಕೋ. ಅವನಿಗೆ ಯಾವುದರಲ್ಲಿಯೂ ಕೊರತೆ ಬರುವಂತೆ ಮಾಡಬೇಡ. ಅವನಿಗೆ ಇನ್ನು ನಿನ್ನ ಹೊರತು ಬೇರೆ ಯಾರೂ ಗತಿಯಿಲ್ಲ. ಅವನಿಗೆ ನಿನಗಿರುವಷ್ಟು ಪರಾಕ್ರಮವೂ ಇದೆ. ಆದುದರಿಂದ ಅವನು ಎಲ್ಲಾ ವಿಷಯಗಳಲ್ಲಿಯೂ ನಿನಗೆ ಸಹಾಯಕನಾಗಿರಬಲ್ಲನು. ಸುಷೇಣನ ಮಗಳೂ ನನ್ನ ಹೆಂಡತಿಯೂ ಆದ ತಾರೆ ತುಂಬಾ ಸೂಕ್ಷ್ಮ ಬುದ್ಧಿ ಉಳ್ಳವಳು. ಬರಲಿರುವ ಕಷ್ಟಗಳನ್ನು ಮುಂದಾಗಿಯೇ ತಿಳಿದುಕೊಳ್ಳಲು ಸಮರ್ಥಳು. ಆದುದರಿಂದ ಅವಳು ಹೇಳಿದ ಹಾಗೆ ಮಾಡು. ನನ್ನ ಕೊರಳಲ್ಲಿರುವ ದೇವೇಂದ್ರನ ಕಾಂಚನ ಮಾಲೆಯನ್ನು ಈಗಲೇ ನೀನು ತೆಗೆದುಕೋ. ನಾನು ಸತ್ತುಹೋದ ಕೂಡಲೇ ಇದರ ಕಾಂತಿಯೂ ಪ್ರಭಾವವೂ ಹೋಗಿಬಿಡುತ್ತವೆ." ಈ ಮಾತಿನಂತೆ ಸುಗ್ರೀವನು ಅವನ ಕೊರಳಿನ ಕಾಂಚನ ಮಾಲೆ

೬. ಸುಗ್ರೀವನಿಗೆ ಪಟ್ಟಾಭಿಷೇಕ



ಯನ್ನು ತೆಗೆದುಕೊಂಡನು. ತರುವಾಯ ವಾಲಿ ಅಂಗದನನ್ನು ಕರೆದು ಕೆಲವು ಹೇಳಿದನು :

"ಮಗನೇ, ಇನ್ನು ನೀನು ನನ್ನ ಹತ್ತಿರ ನಡೆದುಕೊಂಡ ಹಾಗೆಯೇ ಸುಗ್ರೀವನ ಹತ್ತಿರವೂ ನಡೆದುಕೊಂಡಿರಬೇಕು. ಸುಗ್ರೀವನ ಶತ್ರುಗಳೊಂದಿಗೆ ನೀನೆಂದೂ ಸೇರಬಾರದು. ಸುಗ್ರೀವನು ಹೇಳಿದ ಕೆಲಸಗಳನ್ನು ಮನಸ್ಸಿಟ್ಟು ಮಾಡಬೇಕು. ಯಾರೊಂದಿಗೇ ಆಗಲಿ, ಅಮಿತ ಸ್ನೇಹ ಮಾಡಬೇಡ; ಸ್ನೇಹ ಮಾಡದೆಯೂ ಇರಬೇಡ. ಸುಗ್ರೀವನೇ ನಿನಗಿನ್ನು ತಂದೆ" ಹೀಗೆ ಹೇಳಿ ವಾಲಿ ಪ್ರಾಣಬಿಟ್ಟನು.

ವಾಲಿ ಸತ್ತುಹೋದುದನ್ನು ನೋಡಿ ವಾನರರೆಲ್ಲಾ ರೋದಿಸಿದರು. ವಾಲಿ ಮಾಡಿದ ಮಹಾ ಮಹಾ ಕಾರ್ಯಗಳನ್ನು ಹೇಳಿ ಹೇಳಿ ಗೋಳಾಡಿದರು. ಈ ವಾಲಿಯೊಮ್ಮೆ ಗೋಲಭನೆಂಬ ಗಂಧರ್ವನೊಂದಿಗೆ ಹದಿನೈದು ವರ್ಷಗಳವರೆಗೆ ಹೋರಾಡಿ ಅವನನ್ನು ಕೊಂದನೆಂಬ ಸಂಗತಿ ಆಗ ಹೇಳಿಕೊಂಡರು.

ತಾರೆ ಕೂಡಾ ತನ್ನ ಗಂಡನ ಗುಣಗಣಗಳನ್ನು ನೆನೆನೆನೆದು ತುಂಬಾ ರೋದಿಸಿದಳು. ನೀಲನು ವಾಲಿಯ ಎದೆಯಲ್ಲಿ ನಟ್ಟ ರಾಮಬಾಣವನ್ನು ಕಿತ್ತು ತೆಗೆದನು. ತಾರೆ ಹೇಳಿದ ರೀತಿಯಾಗಿ ಅಂಗದನು ವಾಲಿಯ ಕಾಲು ಹಿಡಿದು ನಮಸ್ಕಾರ ಮಾಡಿದನು. ತಾರೆಯ ಶೋಕವನ್ನು ನೋಡುತ್ತಾ ಸುಗ್ರೀವನಿಗೆ ದುಃಖ ಸಹಿಸಲಾಗಲಿಲ್ಲ. ತಾನು ವಾಲಿಯನ್ನು ಕೊಲ್ಲಿಸಿದುದಕ್ಕೆ ತುಂಬಾ ಬಾಧೆಪಟ್ಟನು. ಅವನು ಕಣ್ಣೀರು ತುಂಬಿಕೊಂಡು ರಾಮನ ಬಳಿಗೆ ಹೋಗಿ, ಗದ್ಗದ ಕಂಠದಿಂದ, "ರಾಮಾ, ನೀನು ನನಗೆ ಕೊಟ್ಟ ಮಾತನ್ನು ಉಳಿಸಲು ವಾಲಿಯನ್ನು ಒಂದೇ ಬಾಣದಿಂದ ಕೊಂದೆ. ನನಗೆ ರಾಜ್ಯ ಬರುವಂತೆ ಮಾಡಿದೆ. ಆದರೆ ನಾನೆಂತಹ ಕಟುಕನೋ ಕಾಣೆನು. ನನಗೀಗ ಜೀವಿತದ ಮೇಲೆ ಯಾವ ಆಶೆಯೂ ಕಾಣುವುದಿಲ್ಲ. ವಾನರರೆಲ್ಲಾ ಹೀಗೆ ಅಳುತ್ತಿರುವಾಗ ಇದಕ್ಕೆಲ್ಲಾ ಕಾರಣನಾದ ನನಗೆ ಇನ್ನು ರಾಜ್ಯವೇಕೆ? ಪರಾಕ್ರಮವೇಕೆ? ಮೊದಲು ವಾಲಿ ನನಗೆ ಕೊಟ್ಟ ಕಷ್ಟಗಳನ್ನು ತಾಳಲಾರದೆ ವಾಲಿ ಸಾಯಬೇಕೆಂದು ಬಯಸಿದ್ದು ನಿಜ. ಆದರೆ ಈಗ ನಿಜವಾಗಿಯೇ ವಾಲಿ ಸತ್ತುಹೋದ ಮೇಲೆ ಪಶ್ಚಾತ್ತಾಪವು ನನ್ನನ್ನು ದಹಿಸುತ್ತಾ ಇದೆ. ಬೇಡ, ನನಗೇನೂ ಬೇಡ. ನನ್ನ ಶೇಷಾಯುಷ್ಯವನ್ನು ಋಷ್ಯಮೂಕ ಪರ್ವತದಲ್ಲಿಯೇ ಕಳೆಯಬೇಕೆಂದು ನಿಶ್ಚಯಿಸಿದ್ದೇನೆ. ಈಗ ನನಗೆ ಸ್ವರ್ಗ ಕೂಡಾ ಬೇಡವೆನಿಸುತ್ತದೆ. ವಾಲಿ ನನ್ನನ್ನು ಜೀವದೊಂದಿಗೆ ಉಳಿಸಿದ್ದಾನೆ. ನಾನು ಅವನ ಪ್ರಾಣಗಳನ್ನು ಹಾರಿಸಿದೆ. ನನಗಿಂತಲೂ ಹೆಚ್ಚಿನ ಪಾಪಿ ನಿದ್ದಾನೆಯೆ? ಈಗ ನಾನು ಯುವ ರಾಜನಾಗಿರಲಿಕ್ಕೂ ಅರ್ಹನಲ್ಲ. ಇಷ್ಟು ಮಾಡಿಸಿದ ನಾನು ಇನ್ನು ಮೇ ಹೇಗೆ ವಾನರರನ್ನು ಮಾತಾಡಿಸಲಿ? ನಾನು ಕೂಡಾ ವಾಲಿಯೊಂದಿಗೇ ದಹನವಾಗಿ ಹೋಗುವುದು ಒಳ್ಳೆಯದು. ನಿನ್ನ ಕಾರ್ಯವನ್ನು ವಾನರ

ವೇರಿಸಿ ಕೊಡಬಲ್ಲರು." ಎಂದನು. ಆಗ ತಾರೆ ಮುಂದೆ ಬಂದು ರಾಮನನ್ನು ನೋಡಿ, "ರಾಮಾ, ವಾಲಿಯನ್ನು ಕೊಂದ ಬಾಣದಿಂದ ನನ್ನನ್ನೂ ಕೊಂದು, ವಾಲಿಯ ಬಳಿಗೆ ಕಳಿಸಿಬಿಡು. ನಾನು ಜತೆಯಲ್ಲಿಲ್ಲದೆ ಹೋದರೆ ವಾಲಿಗೆ ಸುಖವಾಗದು. ಸೀತೆಯ ವಿಯೋಗದಿಂದ ನೀನು ಹೇಗೆ ದುಃಖವನ್ನು ಅನುಭವಿಸುವಿಯೋ ಹಾಗೆಯೇ ವಾಲಿ ಕೂಡಾ ಸ್ವರ್ಗದಲ್ಲಿ ನನ್ನ ವಿಯೋಗದಿಂದ ದುಃಖಿಸುತ್ತಾನೆ. ನನ್ನನ್ನೂ ಕೊಂದುಬಿಟ್ಟರೆ ನಿನಗೆ ವಾಲಿಯನ್ನು ಕೊಂದ ಪಾಪ ಹೋಗುತ್ತದೆ." ಎಂದಳು.

ರಾಮನು ಅವಳಿಗೆ ಸಮಾಧಾನ ಹೇಳುತ್ತ, "ವೀರಪತ್ನಿಯಾದ ತಾರಾ, ನೀನು ಹೀಗೆ ಹೇಳುವುದೂ, ದುಃಖದಿಂದ ಪರವಶಳಾಗುವುದೂ ಸರಿಯಲ್ಲ. ವಾಲಿ ಬದುಕಿರುವಾಗ ನೀನು ಸುಖಭೋಗಗಳಿಂದಿದ್ದ ಹಾಗೆಯೇ ಇನ್ನು ಮುಂದೆಯೂ ಸುಖಪಡುವೆ. ನಿನ್ನ ಮಗನು ಅಂಗದನು ಯುವರಾಜನಾಗುತ್ತಾನೆ." ಎಂದನು.

ಆಮೇಲೆ ರಾಮನು ವಾನರರನ್ನು ನೋಡಿ, "ನೀವೆಲ್ಲರೂ ಅಳುತ್ತಾ ನಿಂತಿದ್ದರೆ ಏನೂ ಆಗದು. ಯಾರು ಸತ್ತರೂ ಯಾರು ಬದುಕಿದರೂ ಕಾಲವು ಸಾಗುತ್ತಾ ಇರುತ್ತದೆ. ನೀವೆಲ್ಲಾ ಎಷ್ಟೇ ಅತ್ತರೂ ಸತ್ತವನಿಗೆ ಏನೂ ಒಳ್ಳೆಯದಾಗುವುದಿಲ್ಲ. ವಾಲಿಗೆ ಊರ್ಧ್ವ ಲೋಕಗಳು ಸಿಗುವ ಕಾರ್ಯಕ್ರಮಗಳು ಯಥಾ ವಿಧಿಯಾಗಿ ನಡೆಯಬೇಕಾದುದೇ ಈಗಿನ ಅಗತ್ಯವಾಗಿದೆ." ಎಂದನು.

ಆಗ ಲಕ್ಷ್ಮಣನು ದುಃಖದಲ್ಲಿ ಮುಳುಗಿದ ಸುಗ್ರೀವನನ್ನು ಕುರಿತು, "ಸುಗ್ರೀವಾ, ಈಗ ವಾಲಿಗೆ ದಹನ ಸಂಸ್ಕಾರ ನಡೆಯಬೇಕು. ವಾನರರ ಮೂಲಕ ಚಂದನವೇ ಮೊದಲಾದ ಸುಗಂಧದ ಕಟ್ಟಿಗೆಗಳನ್ನು ತರಿಸು. ಅಂಗದನಿಗೆ ಸಮಾಧಾನ ಹೇಳಿ, ತಂದೆಯ ಕ್ರಿಯಾಕರ್ಮಗಳಿಗೆ ಅವನನ್ನು ತಯಾರುಗೊಳಿಸು. ಇನ್ನು ಮೇಲೆ ಕಿಷ್ಕಿಂಧೆಯನ್ನು ಪರಿಪಾಲಿಸ ಬೇಕಾಗಿರುವ ನೀನು ದುಃಖಿಸುತ್ತಾ ಕುಳಿತರೆ ಅರ್ಥವಿಲ್ಲ. ನ್ಯಾಯವೂ ಇಲ್ಲ. ಅಂಗದನಿಂದ ಪುಷ್ಪಗಳನ್ನು, ಬಟ್ಟೆ





ಗಳನ್ನು, ಎಣ್ಣೆ, ತುಪ್ಪ, ಗಂಧದ್ರವ್ಯಗಳನ್ನೂ ತರಿಸು, ಪಲ್ಲಕಿ ಸಿದ್ಧವಾಗಲಿ. ಅದನ್ನು ಹೊರುವ ವಾನರರು ಸಿದ್ಧರಾಗಲಿ. ಇವೆಲ್ಲಾ ಕಾಲೋಚಿತವಾಗಿ ಆಗಬೇಕಾದ ಕಾರ್ಯಗಳು " ಎಂದನು.

ಲಕ್ಷ್ಮಣನ ಮಾತನ್ನು ಕೇಳಿ. ತಾರನೆಂಬ ವಾನರನು ಕೂಡಲೇ ಕಿಷ್ಕಿಂಧೆಗೆ ಹೋಗಿ ಬೇಗದಲ್ಲೇ ಪಲ್ಲಕಿಯೊಂದಿಗೆ ತಿರುಗಿ ಬಂದನು. ಅಷ್ಟರೊಳಗೆ ಸುಗ್ರೀವನೇ ಮೊದಲಾದವರು ವಾಲಿಯ ಶರೀರವನ್ನು ಸ್ನಾನಮಾಡಿಸಿ, ಗಂಧಪುಷ್ಪಾದಿಗಳಿಂದ ಅಲಂಕರಿಸಿದರು. ಸುಗ್ರೀವನೂ ಅಂಗದನೂ ಕೂಡಿ ವಾಲಿಯ ಶರೀರವನ್ನೆತ್ತಿ ಪಲ್ಲಕಿಯಲ್ಲಿ ಮಲಗಿಸಿದರು. ಸುಗ್ರೀವನು ದೊಡ್ಡದೊಂದು ಹೂ ಮಾಲೆಯನ್ನು ವಾಲಿಯ ಶರೀರದ ಮೇಲೆ ಇಟ್ಟು, ಪಲ್ಲಕಿ ಹೋಗುವ ದಾರಿಯುದ್ದಕ್ಕೂ ಹೂಗಳನ್ನು ಚೆಲ್ಲುವಂತೆ ವಾನರರಿಗೆ ಆಜ್ಞೆ ಮಾಡಿದನು. ಹೀಗೆ ವಾಲಿಯ ಶವವು ಹೊರಡಲು, ಮುಂದಿನಿಂದ ಅಗ್ನಿಯೊಂದಿಗೆ ಅಂಗದನು ಸಾಗಿದನು. ವಾಲಿಯ ಬಂಧುಗಳಾ
ಸ್ತ್ರೀಯರೂ ಪಲ್ಲಕಿಯ ಹಿಂದೆ ನಡೆದರು. ಒಂದ
ಕಿರುದೊರೆಯ ಸಮೀಪದಲ್ಲಿ ಮರಳಿನ ದಂಡೆಯ
ಮೇಲೆ ಚಿತಿಯನ್ನು ಏರ್ಪಡಿಸಿದ್ದರು. ವಿಧಿಪ್ರಕಾ
ವಾಲಿಯ ಶವಕ್ಕೆ ಅಗ್ನಿ ಸಂಸ್ಕಾರವಾಯಿತು. ದಹ
ವಾದ ಮೇಲೆ ಅಂಗದನಿಂದ ತರ್ಪಣಗಳನ್ನು
ಕೊಡಿಸಿದರು. ರಾಮನೇ ಸಮೀಪವಿದ್ದು ಎಲ್ಲ
ಕರ್ಮಕಾಂಡಗಳನ್ನೂ ಮಾಡಿಸಿದನು.

ಸುಗ್ರೀವನು ಸ್ನಾನಮಾಡಿ ಒದ್ದೆ ಬಟ್ಟೆಯೊಂದಿ
ರಾಮಲಕ್ಷ್ಮಣರ ಬಳಿಗೆ ಬಂದನು. ಆಗ ಅವನೊಂದಿ
ಗಿದ್ದ ಹನುಮಂತನು ರಾಮನನ್ನು ನೋಡಿ ವಿನಯ
ದಿಂದ, "ರಾಮಾ, ನಿನ್ನ ದಯದಿಂದ ಸುಗ್ರೀವನಿ
ರಾಜ್ಯವು ಸಿಗುವ ಹಾಗಾಯಿತು. ನಿನ್ನ ಅಪ್ಪಣ
ಯಾದರೆ ಇನ್ನು ಅವನು ಕಿಷ್ಕಿಂಧೆಯನ್ನು ಪ್ರವೇ
ಮಾಡಿ ಎಷ್ಟೋ ಕೆಲಸಗಳನ್ನು ಮಾಡಬೇಕು. ಅವನ
ಶಾಸ್ತ್ರೋಕ್ತವಾಗಿ ಪಟ್ಟಾಭಿಷೇಕ ಮಾಡಿಕೊಂಡು
ನಿನ್ನನ್ನು ತಕ್ಕ ರೀತಿಯಲ್ಲಿ ಸನ್ಮಾನಿಸುತ್ತಾನೆ. ನೀನ
ಕಿಷ್ಕಿಂಧೆಗೆ ಬಂದು, ನಿನ್ನ ಕೈಯಿಂದಲೇ ಸುಗ್ರೀವನ
ಪಟ್ಟಾಭಿಷೇಕ ಮಾಡಿ ವಾನರರಿಗೆ ಸಂತೋ
ಉಂಟುಮಾಡಬೇಕು " ಎಂದನು.

ಅದಕ್ಕೆ ರಾಮನು, "ಹನುಮಂತಾ, ನಾನ
ತಂದೆಯ ಆಜ್ಞೆಯ ಪ್ರಕಾರ ಹದಿನಾಲ್ಕು ವರ
ವನವಾಸ ಮಾಡಬೇಕಾಗಿ ಬಂದವನು. ಈ ವ್ರ
ನಿಯಮದ ಪ್ರಕಾರ ನಾನು ಗ್ರಾಮಗಳನ್ನೂ ಪಟ್ಟ
ಗಳನ್ನೂ ಪ್ರವೇಶಮಾಡಕೂಡದು. ನೀವೇ ಸುಗ್ರೀ
ನನ್ನು ಕರೆದುಕೊಂಡು ಹೋಗಿ ಅವನಿಗೆ ವೈಭ
ದಿಂದ ಪಟ್ಟಾಭಿಷೇಕ ಮಾಡಿರಿ. ಹಾಗೆಯೇ ಅಂ
ಕುಮಾರನಿಗೂ ಯುವರಾಜ ಪಟ್ಟಾಭಿಷೇಕ ಮಾ
ಬಿಡಿ. ಶ್ರಾವಣ ಮಾಸವು ಪ್ರಾರಂಭವಾಗಿದೆ. ಇ
ನಾಲ್ಕು ತಿಂಗಳವರೆಗೂ ವರ್ಷಾಕಾಲವಾಗಿದೆ. ಇ
ಯುದ್ಧಕ್ಕೆ ತಕ್ಕ ಕಾಲವಲ್ಲ. ನೀವೆಲ್ಲರೂ ಕಿಷ್ಕಿಂ



ಹೋಗಿಬಿಡಿ. ನಾನೂ ಲಕ್ಷ್ಮಣನೂ ಈ ಪರ್ವತದ ಮೇಲಿರುತ್ತೇವೆ. ಇಲ್ಲಿ ಇರುವ ಗುಹೆ ವಿಶಾಲವಾಗಿ, ಸೌಕರ್ಯವಾಗಿದೆ, ಬದಿಯಲ್ಲೇ ನೀರಿನ ಕೊಳವೂ ಕೊಳದಲ್ಲಿ ಹೂಗಳೂ ಇವೆ. ಮತ್ತೆ ಕಾರ್ತಿಕಮಾಸವು ಪ್ರಾರಂಭವಾದಾಗ, ಸೀತೆಯನ್ನು ಹುಡುಕಿಸುವ ಪ್ರಯತ್ನ ಮಾಡೋಣ " ಎಂದು ಹೇಳಿದನು.

ಈ ವಿಧವಾಗಿ ರಾಮನ ಅಪ್ಪಣೆ ಪಡೆದ ಮೇಲೆ. ಸುಗ್ರೀವನು ವಾನರರೊಂದಿಗೆ ಕಿಷ್ಕಿಂಧೆಯನ್ನು ಪ್ರವೇಶಿಸಿದನು. ವಾನರರಲ್ಲಿ ಮತ್ತೆ ಸಂಭ್ರಮ ಸಂಚಾರವಾಯಿತು. ಎಲ್ಲೆಲ್ಲಿಯೂ ಹೊಸ ಚೇತನ ಕಾಣತೊಡಗಿತು. ಸುಗ್ರೀವನು ತನ್ನನ್ನು ನೋಡಲು ಬಂದ ವಾನರರನ್ನು ಸ್ವತಃ ಸವಿಯಾಗಿ ಮಾತಾಡಿಸಿದನು. ಆಮೇಲೆ ಅವನು ತಾರೆಯನ್ನು ಸಮಾಧಾನ ಪಡಿಸಲು ವಾಲಿಯ ಅಂತಃಪುರಕ್ಕೆ ಹೋದನು.

ಸುಗ್ರೀವನ ದೊಡ್ಡ ಗುಣವನ್ನು ನೋಡಿ ತಾರೆ ಸಮಾಧಾನಗೊಂಡು, ಅವನ ಪಟ್ಟಾಭಿಷೇಕಕ್ಕೆ ಸುಮುಖಿಯಾದಳು. ಸುಗ್ರೀವನು ವಾಲಿಯ ಅಂ
ಪುರದಿಂದ ಹಿಂದಿರುಗಿ ಬಂದಮೇಲೆ, ವಾನರರು ಅ
ಮುಂದೆ ಬಂಗಾರದ ಅಲಂಕಾರಗಳನ್ನು ತಂದಿಟ್ಟ
ಬಿಳಿಯ ಕೊಡೆಯನ್ನು ಹಿಡಿದು, ಚಾಮರಗಳ
ಬೀಸ ತೊಡಗಿದರು. ಸುಗ್ರೀವನು ರಾಜೋಚಿತವ
ತನ್ನನ್ನು ಅಲಂಕರಿಸಿಕೊಂಡನು. ಎಲ್ಲಾ ಬಗೆ
ಮಣಿಗಳೂ, ಸಮಸ್ತ ತರುಲತೆಗಳ ಬೀಜಗಳ
ಔಷಧಗಳೂ, ಪುಷ್ಪಚಂದನ ಕುಂಕುಮ ಅಕ್ಷತೆಗಳ
ಜೇನು ತುಪ್ಪ, ಮೊಸರು ಮುಂತಾದ ಎಲ್ಲಾ ಪ
ಗಳೂ ಅಣಿಯಾದುವು. ಕಾಡು ಹಂದಿಯ ಚ
ದಿಂದಾದ ಪಾದರಕ್ಷೆಗಳನ್ನು ಸುಗ್ರೀವನಿಗಾ
ತಯಾರು ಮಾಡಿದರು.

ತರುವಾಯ ಬ್ರಾಹ್ಮಣರು ಅಗ್ನಿಹೋತ್ರವ
ಬೆಳಗಿಸಿ, ಹೋಮಕಾರ್ಯಗಳನ್ನು ಮ
ವೇದೋಕ್ತ ವಿಧಿಯಿಂದ ಸುಗ್ರೀವನಿಗೆ ಪಟ್ಟಾಭಿ
ಮಾಡಿದರು. ಗಜ, ಗವಾಕ್ಷ, ಗವಯ, ಶರಭ, ಗ
ಮಾದನ, ಮೈಂದ, ದ್ವಿವಿಧ, ಹನುಮಂತ, ಜಾ
ವಂತ, ನಳ ಎಂಬ ಇಪ್ಪುಮಂದಿ ವಾನರ ಪ್ರಮುಖ
ಬಂಗಾರದ ಕಲಶಗಳಲ್ಲಿಯ ಜಲವನ್ನು ಎ
ಕೊಂಬಿನ ಮೂಲಕವಾಗಿ ಸುಗ್ರೀವನಿಗೆ ಅಭಿ
ಮಾಡಿದರು. ಅನಂತರ ರಾಮನು ಹೇಳಿದ ಪ್ರ
ಸುಗ್ರೀವನು ಅಂಗದನಿಗೆ ಯುವರಾಜ ಪಟ
ಷೇಕವನ್ನೂ ಮಾಡಿದನು. ಹಾಗೆ ಮಾಡಿದು
ನೋಡಿ ವಾನರರೆಲ್ಲರೂ ಸುಗ್ರೀವನನ್ನು ಮ
ಹೊಗಳಿ ಮೆಚ್ಚಿದರು.

ಹೀಗೆ ಪಟ್ಟಾಭಿಷೇಕ ಕಾರ್ಯಕ್ರಮಗ
ಮುಗಿದು ರಾಜನಾದ ಸುಗ್ರೀವನು ಅಕೂ
ರಾಮನಬಳಿಗೆ ಹೋಗಿ, ನಡೆದ ಎಲ್ಲಾ ಸಮಾ
ಗಳನ್ನೂ ಹೇಳಿ, ಅವನ ಅಪ್ಪಣೆ ಪಡೆದು ಹಿಂದಿ
ಕಿಷ್ಕಿಂಧೆಗೆ ಬಂದನು. ಬಹಳಕಾಲ ಕಷ್ಟಪಟ್ಟ
ಸುಗ್ರೀವನಿಗೆ ಬೇಕಾದ ಎಲ್ಲಾ ಸುಖಗಳೂ

ಲಭಿಸಿದುವು. ತನ್ನ ಹೆಂಡತಿಯಾದ ರುಮೆಯೊಂದಿಗೆ ದಿವಸಗಳನ್ನು ನಿಮಿಷಗಳಂತೆ ಕಳೆಯುತೊಡಗಿದನು.

ರಾಮಲಕ್ಷ್ಮಣರು ಮಳೆಗಾಲವನ್ನು ಕಳೆಯಲು ನಿಶ್ಚಯಿಸಿಕೊಂಡಿದ್ದ ಗುಹೆ ಪ್ರಸ್ರವಣ ಪರ್ವತದ ಮೇಲಿದ್ದಿತು. ಅದು ತುಂಬ ಸುಂದರವಾದ ಪರ್ವತ. ಆ ಗುಹೆಯ ಸಮೀಪದಲ್ಲೇ ಅಂದವಾಗಿ, ಹಂಸ ಕಾರಂಡಕಾದಿ ಜಲಚರಪಕ್ಷಿಗಳಿಂದ ಕೂಡಿದ ಒಂದು ತಾವರೆ ಕೊಳವಿದ್ದಿತು. ಗುಹೆಯ ದ್ವಾರವು ನೈರುತಿ ದಿಕ್ಕಿಗೆ ಇದ್ದುದರಿಂದ ಮಳೆಯ ಹನಿಗಳು ಒಳಗೆ ಹಾರುವ ತೊಂದರೆ ಇರಲಿಲ್ಲ. ಪೂರ್ವದಿಕ್ಕಿನಿಂದ ಬೀಸುವ ತಣ್ಣಗಿನ ಗಾಳಿಯೂ ಒಳಗೆ ನುಸುಳು ವಂತಿಲ್ಲ. ಗುಹೆಯ ಮುಂದೆ ಸುಂದರವಾದ ಸಮತಲ ಪ್ರದೇಶವಿತ್ತು. ಸ್ವಲ್ಪ ದೂರದಲ್ಲಿ ಚಿಕ್ಕದೊಂದು ನದಿ ಕೂಡಾ ಪ್ರವಹಿಸುತ್ತಿದ್ದಿತು. ಕಿಷ್ಕಿಂಧೆ ಅಲ್ಲಿಗೆ ಬಹಳ ದೂರವೇನಲ್ಲ. ಕಿಷ್ಕಿಂಧೆಯಲ್ಲಿ ನಡೆಯುವ ಕೋಲಾಹಲ ಧ್ವನಿಗಳು ಗುಹೆಯೊಳಗೆ ಸ್ಪಷ್ಟವಾಗಿ ಕೇಳಿಸುತ್ತಿದ್ದುವು.

ಅಂತಹ ಸುಂದರ ಮತ್ತು ಸೌಕರ್ಯದಿಂದೊಡ ಗೂಡಿದ ಸ್ಥಳದಲ್ಲಿರುತ್ತ ರಾಮನು, ಸಂತೋಷದಿಂದ ಕಾಲಕಳೆಯುವ ಸ್ಥಿತಿಯಲ್ಲಿರಲಿಲ್ಲ. ಸೀತೆಯ ವಿರಹ ತಾಪವು ಅವನನ್ನು ಕೊರೆದುಕೊಂಡಿದ್ದಿತು. ರಾವಣ ನನ್ನು ಕಂಡುಹಿಡಿದು ಕೊಲ್ಲುವುದಕ್ಕೆ ಸುಗ್ರೀವನು ಸಹಾಯ ಮಾಡುವನೆಂಬ ಆಶೆಯನ್ನಿಟ್ಟುಕೊಂಡು, ಶರತ್ಕಾಲ ಯಾವಾಗ ಬರುವುದೋ ಎಂದು ಇದಿರು ನೋಡುತ್ತಿದ್ದನು.

ಅಂತೂ ಕಡೆಗೆ ಮಳೆಗಾಲ ಹಿಂದೆ ಹೋಯಿತು. ಆಕಾಶವು ಶುಭ್ರವಾಯಿತು. ರಾಮನಂತೆ ಹನು ಮಂತನೂ ಕಾಲವನ್ನು ಗಮನಿಸಿಕೊಂಡಿದ್ದನು. ಮಳೆ ಗಾಲ ಕಳೆದು ದಿನಗಳುರುತ್ತಿದ್ದರೂ ಸುಗ್ರೀವನು ರಾಮಕಾರ್ಯವನ್ನು ಮರೆತುಹೋದ ಹಾಗೆ ಹನು ಮಂತನಿಗೆ ತೋರಿತು. ರಾಜನಾದಂದಿನಿಂದ



ಸುಗ್ರೀವನು ರಾಜ್ಯಭಾರವನ್ನೆಲ್ಲಾ ಮಂತ್ರಿಗಳ ಮೇಲೆ ಬಿಟ್ಟುಕೊಟ್ಟು, ತನ್ನ ಕಾಲವನ್ನೆಲ್ಲಾ ಸ್ತ್ರೀಯರ ನಡುವೆಯೇ ಕಳೆಯುವುದರಲ್ಲಿ ಮಗ್ನನಾಗಿದ್ದನು. ಅವನು ತನ್ನ ಅಣ್ಣನ ಹೆಂಡತಿ ತಾರೆಯನ್ನು ಕೂಡಾ ತನ್ನ ಹೆಂಡತಿಯನ್ನಾಗಿ ಮಾಡಿಕೊಂಡು ಸಂತೋಷ ಸಮುದ್ರದಲ್ಲಿದ್ದನು.

ಇದನ್ನು ಗಮನಿಸಿಕೊಂಡಿದ್ದ ಹನುಮಂತನು, ಒಂದುದಿನ ತಾನೇ ಸುಗ್ರೀವನ ಬಳಿಗೆ ಹೋಗಿ, "ವಾನರರಾಜನೇ, ನಿನಗೀಗ ರಾಜ್ಯವೂ, ಸಕಲ ವೈಭವಗಳೂ ಬಂದಿವೆ. ಈ ಸಮಯದಲ್ಲಿ ಸ್ನೇಹಿತರ ಮೇಲಿರುವ ನಿನ್ನ ಬಾಧ್ಯತೆಯನ್ನು ಕೂಡಾ ನಡೆಸಿ ಕೊಡಬೇಕು. ಸ್ವಂತ ಕೆಲಸಗಳು ಕೆಟ್ಟು ಹೋಗುವ ಹಾಗೆ ಬಿಟ್ಟಾದರೂ ಸ್ನೇಹಿತರ ಕೆಲಸವನ್ನು ಮೊದಲು ಮಾಡುವವನು ಎಂದಿಗೂ ಕೆಡಲಾರನು. ನಾವೀಗ ರಾಮನಿಗಾಗಿ ಸೀತಾದೇವಿಯನ್ನು ಹುಡುಕಿಸ ಬೇಕಾಗಿದೆ. ಈ ಕೆಲಸ ಇಷ್ಟರಲ್ಲೇ ಪ್ರಾರಂಭವಾಗಿಬಿಡ



6

ಬೇಕಿತ್ತು. ರಾಮನು ಸಾವಧಾನವುಳ್ಳ, ಒಳ್ಳೆಯವನಾದುದರಿಂದ ತಾಳ್ಮೆಯನ್ನು ವಹಿಸಿಕೊಂಡಿದ್ದಾನೆ. ಇನ್ನು ತಡಮಾಡಬೇಡ. ಸೀತಾದೇವಿಯನ್ನು ಹುಡುಕಲು ವಾನರರನ್ನು ಕಳುಹಿಸುವ ಕಾರ್ಯಕ್ಕೆ ಆಜ್ಞೆ ಮಾಡು" ಎಂದನು.

ಹನುಮಂತನ ಎಚ್ಚರಿಕೆಯ ಮಾತುಗಳು ಸುಗ್ರೀವನನ್ನು ಬಡಿದೆಬ್ಬಿಸಿಬಿಟ್ಟಿತು. ಕೂಡಲೇ ಅವನು ಅವಸರವಾಗಿ ನೀಲನನ್ನು ಕರೆಯಿಸಿ ಎಂಟು ದಿಕ್ಕುಗಳಲ್ಲಿಯೂ ಇರುವ ವಾನರ ಸೇನೆಗಳನ್ನೆಲ್ಲಾ ಕಿಷ್ಕಿಂಧೆಗೆ ಬರಮಾಡಬೇಕೆಂದು ಆಜ್ಞೆ ಮಾಡಿದನು. ಹದಿನೈದು ದಿನಗಳೊಳಗೆ ಬಂದು ಸೇರದಿರುವ ವಾನರರಿಗೆ ಮರಣ ದಂಡನೆ ಕೊಡುವುದಾಗಿ ಪ್ರಕಟಪಡಿಸಿದನು. ಸುಗ್ರೀವನ ಈ ಆಜ್ಞೆ ಎಲ್ಲಾ ವಾನರರಿಗೂ ಬಹುಬೇಗನೇ ಮುಟ್ಟಿತು.

ಇಷ್ಟರೊಳಗೆ ಸಮಯ ಮೀರಿದುದರಿಂದ ರಾಮನ ತಾಳ್ಮೆಯೂ ತುಂಬಿ ನಿಂತಿತ್ತು. ಮಳೆಗಾಲ ಕಳೆದರೂ ಸುಗ್ರೀವನು ತನ್ನ ಬಳಿಗೆ ಬಾರದಿರುವುದನ್ನು ನೋಡಿ ರಾಮನು ತಳಮಳಿಸತೊಡಗಿದನು. ಅವನು ಲಕ್ಷ್ಮಣನನ್ನು ಕುರಿತು, "ನೋಡಿದೆಯಾ ಲಕ್ಷ್ಮಣಾ, ಶರತ್ಕಾಲವು ಪ್ರಾರಂಭವಾದ ಕೂಡಲೇ ಸೀತೆಯನ್ನು ಹುಡುಕಿಸುತ್ತೇನೆಂದು ಸುಗ್ರೀವನು ಮಾತು ಕೊಟ್ಟು, ತನ್ನ ಕಾರ್ಯವಾದ ಮೇಲೆ ತನ್ನ ಮಾತನ್ನು ಮರೆತು ಉಪೇಕ್ಷೆಯಿಂದಿದ್ದಾನೆ. ನೀನು ಅವನ ಬಳಿಗೆ ಹೋಗಿ ನಾನು ಕೋಪದಿಂದಿರುವ ಸಂಗತಿಯನ್ನು ಹೇಳು. ವಾಲಿಯನ್ನು ಕಳುಹಿಸಿದ ದಾರಿ ಸುಗ್ರೀವನಿಗೂ ಬೇಕೇ ಎಂದು ಕೇಳು. ಮೊದಲು ನಾನು ವಾಲಿಯೊಬ್ಬನನ್ನೇ ಕೊಂದೆ. ಈಗ ಸುಗ್ರೀವನು ಮಾತು ತಪ್ಪಿದರೆ ಅವನನ್ನೂ ಅವನ ಬಂಧುಗಳನ್ನು ಕೂಡಾ ಕೊಲ್ಲುತ್ತೇನೆ. ಇದನ್ನೆಲ್ಲಾ ಅವನಿಗೆ ಹೇಗೆ ಹೇಳಬೇಕೋ ಹೇಳಿ ಬಾ" ಎಂದನು.

ಲಕ್ಷ್ಮಣನು ಕೂಡಾ ಸುಗ್ರೀವನ ಮೇಲೆ ಬಹಳ ಕೋಪಗೊಂಡು, "ಹುಂ, ಈ ಸುಗ್ರೀವನು ತನಗೆ ರಾಜ್ಯ ಹೇಗೆ ಬಂತೆಂಬುದನ್ನು ಮರೆತುಬಿಟ್ಟ. ಇನ್ನು ಮೇಲೆ ಅವನ ರಾಜ್ಯ ದಕ್ಕಲಾರದು. ನಾನು ಈಗಲೇ ಹೋಗಿ ಆ ಸುಗ್ರೀವನನ್ನು ಕೊಂದು, ಅಂಗದನ ಸಹಾಯದಿಂದ ಸೀತಾದೇವಿಯನ್ನು ಹುಡುಕಿಸುತ್ತೇನೆ" ಎನ್ನುತ್ತ ಹೊರಡುವಾಗ, ರಾಮನು ಅವನನ್ನು ತಡೆದು, "ತಾಳು ಲಕ್ಷ್ಮಣಾ, ದುಡುಕಿ ಹಾಗೇನೂ ಮಾಡಿಬಿಡಬೇಡ. ನಮಗೂ ಅವನಿಗೂ ನಡುವೆ ಇರುವ ಸ್ನೇಹವನ್ನು ಮರೆಯಬೇಡ. ಸುಗ್ರೀವನೊಂದಿಗೆ ಒಳ್ಳೆಯ ರೀತಿಯಲ್ಲೇ ಮಾತಾಡು. ಅವನು ಉದಾಸೀನನಾಗಿರುವನೇ ಹೊರತು ನಮಗೆ ಅಪಚಾರವೇನೂ ಮಾಡಲಿಲ್ಲವಷ್ಟೇ?" ಎಂದು ಎಚ್ಚರಿಕೆ ಹೇಳಿ ಕಳುಹಿಸಿದನು.

